ಮುಂಜಾವು
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114
5ನೇ ವರ್ಷ 45ನೇ ಸಂಚಿಕೆ ಕೊಪ್ಪ 2-8-1987 ಭಾನುವಾರ ಬೆಲೆ 50 ಪೈಸೆ

3 ಬೇಡಿಕೆ ಇತ್ಯರ್ಥ, 150ರೂ. ತಾತ್ಕಾಲಿಕ ಪರಿಹಾರ;

ಉಳಿದೆಲ್ಲ ಬೇಡಿಕೆಗಳ ಚರ್ಚೆಗೆ ಮಾಲೀಕರ ಒಪ್ಪಿಗೆ :

# ಶಂಕರ್ ಕಾರ್ಮಿಕರ ಮುಷ್ಕರ ನಿಲುಗಡೆ

**ಕೊಪ್ಪ : ತಾತ್ಕಾಲಿಕ ಪರಿಹಾರ ನೀಡಿಕೆ ಹಾಗೂ ಬೇಡಿಕೆ ಪತ್ರದಲ್ಲಿನ ಎಲ್ಲ ಬೇಡಿಕೆಗಳ ಬಗ್ಗೆ ಮಾತುಕತೆ ನಡೆಸಲು ಮಾಲೀಕ ವರ್ಗ ಒಪ್ಪಿರುವ ನೆಲೆಯಲ್ಲಿ, ಇಲ್ಲಿನ ಶಂಕರ್ ಸಾರಿಗೆ ಸಂಸ್ಥೆ ನೌಕರರ ಮುಷ್ಕರ ಕೊನೆಗೊಂಡು, ಜು. 28ರಿಂದ ಬಸ್‌ಗಳ ಓಡಾಟ ಪುನರಾರಂಭವಾಗಿದೆ.**

ಗ್ಯಾರೇಜ್ ಮತ್ತು ರನ್ನಿಂಗ್ ಸಿಬ್ಬಂದಿಗಳಿಗೆ ವರ್ಷಕ್ಕೆ 6 ದಿನ ಕ್ಯಾಶ್ಯುವಲ್ ರಜೆ, ತಿಂಗಳಿಗೆ 450 ರೂ. ವರೆಗಿನ ಸಂಬಳದವರಿಗೆ 20 ರೂ ಹಾಗೂ ಅದಕ್ಕಿಂತ ಹೆಚ್ಚಿನವರಿಗೆ 30 ರೂ. ಮನೆ ಬಾಡಿಗೆ ಭತ್ಯ ಹಾಗೂ ವರ್ಷಕ್ಕೆ ಒಂದು ಜೊತೆ ಲಿಡ್ಕರ್ ತಯಾರಿಕೆಯ 'ಪರಾಣ್' ಚಪ್ಪಲಿಗಳು—ಇವಿಷ್ಟನ್ನು ನೀಡಲು ಮಾಲೀಕ ವರ್ಗ ಒಪ್ಪಿದೆ. ಕಚೇರಿ ಸಿಬ್ಬಂದಿಗಳ ಹೊರತು ಬೇರಾರಿಗೂ ಈ ಸೌಲಭ್ಯಗಳು (ಚಪ್ಪಲಿ ಹೊರತುಪಡಿಸಿ) ಈವರೆಗೆ ಇರಲಿಲ್ಲ

(ಜು. 9ರಂದು ನಡೆದು ವಿಫಲವಾದ ಸಂಧಾನದ ವೇಳೆ ಈ ಮೂರು ಬೇಡಿಕೆಗಳಿಗೆ ಮಾಲೀಕರು ಒಪ್ಪಿದ್ದರಾದರೂ ಮನೆ ಬಾಡಿಗೆ ಭತ್ಯ 15 ರೂ. ಮತ್ತು 20 ರೂ, ಕ್ಯಾ. ರಜೆ 5 ದಿನ ಕೊಡಲೊಪ್ಪಿದ್ದು, ಚಪ್ಪಲಿ ಲಿಡ್ಕರ್ ಎಂದು ನಿಗದಿ ಮಾಡಿರಲಿಲ್ಲ )

ಪ್ರಮುಖ ಬೇಡಿಕೆಯಾದ ವೇತನ ಹೆಚ್ಚಳದ ಬಗ್ಗೆ ಸಮರ್ಪಕವಾದ ಒಡಂಬಡಿಕೆ ಮೂಡದಿದ್ದರಿಂದ ಅದರ ಬಗ್ಗೆ ಹಾಗೂ ಉಳಿದೆಲ್ಲ ಬೇಡಿಕೆಗಳ ಬಗ್ಗೆ ಅತಿ ಶೀಘ್ರದಲ್ಲೇ ಎರಡೂ ಕಡೆಯವರು ಪುನಃ ಸಭೆ ಸೇರಿ ಚರ್ಚಿಸುವುದೆಂದೂ, ಆ ಬಾಬ್ತು ತಾತ್ಕಾಲಿಕ ಪರಿಹಾರವಾಗಿ 150 ರೂ.ಗಳನ್ನು ಸಂಸ್ಥೆ ಎಲ್ಲಾ ಕಾರ್ಮಿಕರಿಗೂ ನೀಡುವುದೆಂದೂ ಒಪ್ಪಂದವಾಗಿ, ಮುಂದಿನ ಮಾತುಕತೆಗಳಿಗೆ ಸೌಹಾರ್ದದ ವಾತಾವರಣ ಕಲ್ಪಿಸುವ ದೃಷ್ಟಿಯಿಂದ ಕಾರ್ಮಿಕರು ಮುಷ್ಕರ ನಿಲ್ಲಿಸಲು ಒಪ್ಪಿಕೊಂಡರು.

ವೇತನ ಪುನರ್ವಿಮರ್ಶೆಯಾದ ನಂತರ ಕಾರ್ಮಿಕರಿಗೆ ದೊರೆಯುವ ವೇತನದ ಬಾಕಿಯಲ್ಲಿ (arrears) ಈ 150 ರೂ.ಗಳನ್ನು ಮುಂಗಡ ಹಣದಂತೆ ಮುರಿದುಕೊಳ್ಳಲಾಗುವುದು. (ಕೆಲವರು ಬಹುಶಃ ತಿಳಿದುಕೊಂಡಿರುವಂತೆ ಸಂಬಳದಿಂದ ಮುರಿದುಕೊಳ್ಳುವುದಲ್ಲ ಸಂಬಳ ಏರಿಕೆಯಾದ ಮೇಲೆಯೇ.) ಸಂಬಳ ಏರಿಕೆಯ ಬಗ್ಗೆ ಕೂಡ ಮಾಲೀಕರು ಕೊಡಲೊಪ್ಪಿದ ಮೊತ್ತ ಕಾರ್ಮಿಕರಿಗೆ ತೃಪ್ತಿಕರವಾಗದ್ದರಿಂದ ಆ ಬೇಡಿಕೆಯ ಚರ್ಚೆ ಮುಂದೂಡಲಾಗಿದೆ.

ಇದಲ್ಲದೆ ಮುಷ್ಕರದ ಸಂಘಟನೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದವರ ಮೇಲೆ ಬಸ್ ಚಕ್ರದ ಗಾಳಿ ಬಿಟ್ಟದ್ದು, ಕಲ್ಲು ಹೊಡೆದದ್ದು — ಮುಂತಾದ ಆಪಾದನೆಗಳನ್ನು ಹೊರಿಸಿ, ಸೇವೆಯಿಂದ ತೆಗೆದು ಹಾಕುವ ಬಗ್ಗೆ ಚಾರ್ಜ್‌ಶೀಟ್‌ಗಳನ್ನು ಕಂಪೆನಿ ಸಿದ್ಧಪಡಿಸಿದ್ದು. ಈ ವಿಚಾರದಲ್ಲಿ ಎರಡೂ ಪಕ್ಷಗಳೂ ಚರ್ಚಿಸಿ ಇತ್ಯರ್ಥಗೊಳಿಸಬೇಕೆಂದೂ, ಇತ್ಯರ್ಥವಾಗದಿದ್ದಲ್ಲಿ ಎ ಎಲ್ ಸಿಯವರ ತೀರ್ಮಾನಕ್ಕೆ ಬಿಡಬೇಕೆಂದೂ ಒಪ್ಪಲಾಗಿದೆ.

ಹೆಚ್ಚಿನ ಮಾತುಕತೆಗಳು ಇಷ್ಟರಲ್ಲೇ ಆರಂಭವಾಗುವುವೆಂದಿರುವ ಸಂಘದ ಪ್ರಧಾನ ಕಾರ್ಯದರ್ಶಿ ಎಚ್. ಎಂ. ರೇಣುಕಾರಾಧ್ಯ, ಮುಷ್ಕರದ ವೇಳೆ ಸಹಾನುಭೂತಿ ತೋರಿದ, ಸಹಕರಿಸಿದ ಎಲ್ಲರಿಗೂ ಕಾರ್ಮಿಕರ ಪರವಾಗಿ ಕೃತಜ್ಞತೆ ಸಲ್ಲಿಸಿದ್ದಾರೆ.

## ಶಂಕರ್ ಸಂಸ್ಥೆಯ ಕಾರ್ಮಿಕ ಮುಂದಾಳು ಚಿಕ್ಕೇಗೌಡರ ಮೇಲೆ ಮಾರಕ ಹಲ್ಲೆ

**ಕೊಪ್ಪ : ಈ ವರದಿಗಳು ಅಚ್ಚಿಗೆ ಹೋಗುತ್ತಿರುವಂತೆ, ನಿನ್ನೆ (ಶನಿವಾರ) ರಾತ್ರಿ ಶಂಕರ್ ಕಂಪೆನಿಯ ಮೆಕ್ಯಾನಿಕ್ ಚಿಕ್ಕೇಗೌಡರ ಮೇಲೆ ಇಬ್ಬರು ದುಷ್ಕರ್ಮಿಗಳು ಮಾರಕವಾಗಿ ಹಲ್ಲೆ ನಡೆಸಿರುವುದು ಗೊತ್ತಾಗಿದೆ.**

ಶಂಕರ್ ಕಂಪೆನಿಯ ಮಾಲೀಕರು ಚಿಕ್ಕೇಗೌಡ, ಸಂಜೀವ, ಬಿ. ಟಿ. ಚಂದ್ರ, ಬೆಳ್ಳೂರ್, ಬಾಳೆಹೊನ್ನೂರಿನ ಶಂಕರನಾರಾಯಣ ಭಟ್ ಮುಂತಾದವರ ಹಿಂದೆ 'ಜನ'ಗಳನ್ನು ಬಿಟ್ಟಿದ್ದಾರೆಂಬ ವರ್ತಮಾನ ರಾತ್ರಿ 9 ಗಂಟೆಯ ಹೊತ್ತಿಗೆ ಬಂದಿದ್ದರೂ, ಅದನ್ನು ಅಷ್ಟಾಗಿ ತಲೆಗೆ ಹಚ್ಚಿಕೊಳ್ಳದೆ ಚಿಕ್ಕೇಗೌಡ ಎರಡನೇ ಶೋ ಸಿನಿಮಾಕ್ಕೆ ಹೋಗಿದ್ದರು.

ರಾತ್ರಿ ಸುಮಾರು 12 ಗಂಟೆಯ ಹೊತ್ತಿಗೆ ಸಿನಿಮಾ ಮುಗಿಸಿ, ಟಾಕೀಸಿನ ಹಿಂಭಾಗದ ರಸ್ತೆಯಲ್ಲಿದ್ದ ತಮ್ಮ ರೂಮಿಗೆ ಹೋಗುವಾಗ ನಿರ್ಜನ ರಸ್ತೆಯಲ್ಲಿ ಹಿಂಬಾಲಿಸಿ ಬಂದ ಇಬ್ಬರು ಗಂಟೆ ಕೇಳಿ, ಬೀಡಿಗೆ ಬೆಂಕಿ ಕೇಳಿ, ಅನಂತರ 'ನೀವು ಕಂಪೆನಿಯಲ್ಲಿರುವುದಾ?' ಎಂದು ವಿಚಾರಿಸಿ, ಹೌದೆಂದಾಗ, "ಏನೋ, ಕಂಪೆನಿಯಲ್ಲಿ ನೀನೇನು ಧೊಡ್ಡ ದಾದನಾ? ಇನ್ನು ಎರಡು ದಿನದಲ್ಲಿ ಕಂಪೆನಿ ಬಿಟ್ಟು ಹೋಗದಿದ್ದರೆ ನಿನ್ನನ್ನು ಕೊಂದುಹಾಕ್ತೇವೆ" ಎನ್ನುತ್ತಾ ಹಿಂದಿನಿಂದ ತಲೆಗೆ ಬಲವಾಗಿ ಹೊಡೆದರು.

ಇದರಿಂದ ತಲೆ ತಿರುಗಿ ಬಿದ್ದ ತನಗೆ ಪುನಃ ಎದೆ, ಹೊಟ್ಟೆ, ಮುಂತಾಗಿ ಒದ್ದು, ಹೊಡೆದು ತೀವ್ರ ರೀತಿಯಲ್ಲಿ ಹಲ್ಲೆ ನಡೆಸಿದರು. ಇದರಿಂದಾಗಿ ಪ್ರಜ್ಞೆ ತಪ್ಪಿ ಬಿದ್ದೆ ಎಂದು ಚಿಕ್ಕೇಗೌಡ ಹೇಳಿದ್ದಾರೆ.

ಸುಮಾರು ರಾತ್ರಿ 2 ಗಂಟೆಯ ಹೊತ್ತಿಗೆ ಮರಳು ರಾಶಿಯಲ್ಲಿ ಎಚ್ಚರವಿಲ್ಲದೆ ಬಿದ್ದಿದ್ದ ಅವರನ್ನು ಗೂರ್ಖ ನೋಡಿ, ಎಬ್ಬಿಸಿ ಠಾಣೆಗೆ ಕರೆತಂದು ಬಿಟ್ಟರೆನ್ನಲಾಗಿದೆ. ಬೆಳಗಿನ ತನಕ ಅಲ್ಲಿ ಮಲಗಿದ್ದ ಅವರನ್ನು ನಂತರ ಆಸ್ಪತ್ರೆಗೆ ಕರೆದೊಯ್ದು, ಪರೀಕ್ಷಿಸಿ ಚಿಕಿತ್ಸೆ ನೀಡಲಾಯಿತು. ತೀವ್ರವಾದ ಪೆಟ್ಟೇನೂ ಆಗದೆ ಪಾರಾಗಿದ್ದಾರೆಂದು ಹೇಳಲಾಗಿದೆ. ಹಲ್ಲೆ ನಡೆದ ವೇಳೆ ಬಹುಶಃ ಯಾರಾದರೂ ಆ ದಾರಿಯಲ್ಲಿ ಬಂದುದರಿಂದ ಅಷ್ಟಕ್ಕೇ ಬಿಟ್ಟು ಹೋಗಿರಬಹುದೆಂದು ಊಹಿಸಲಾಗಿದೆ.

ಪೋಲೀಸರಿಗೆ ದೂರು ನೀಡಲಾಗಿದ್ದು, ತನಿಖೆ ನಡೆಯುತ್ತಿದೆ.

## ಮಲೆನಾಡಿನಲ್ಲಿ ಬರದ ಮುನ್ಸೂಚನೆ ?

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ: ಪ್ರಕೃತಿಯ ಅಪ ಬಳಕೆ ಅಥವಾ ಅರಣ್ಯದ ಮೇಲಿನ ನಿರಂತರ ಅತ್ಯಾಚಾರದ ಪ್ರತೀಕಾರವಾಗಿಯೋ ಎಂಬಂತೆ, ಕಳೆದ ಕೆಲವು ವರ್ಷಗಳಿಂದ ಗಣನೀಯವಾಗಿ ಕಡಿಮೆಯಾಗುತ್ತಾ ಬಂದಿರುವ ಮಳೆ ಈ ಬಾರಿ ಪೂರ್ತಿ ಕೈ ಕೊಟ್ಟಿದೆ.

1977ಕ್ಕಿಂತ ಹಿಂದೆ ಈ ತಾಲ್ಲೂಕಿನಲ್ಲಿ ಮಳೆಯ ಸರಾಸರಿ 200 ಅಂಗುಲ ಇದ್ದು, ನಿತ್ಯ ಹಸಿರಿನ ಮಲೆನಾಡು ಅರಣ್ಯವನ್ನು ಕಳೆದುಕೊಂಡು ಬೆತ್ತಲಾಗುತ್ತಾ ಬಂದಂತೆಲ್ಲ ವರ್ಷ ವರ್ಷಕ್ಕೂ ಕ್ಷೀಣಿಸುತ್ತಿದೆ.

ಈ ವರ್ಷ ಜುಲೈ ಕೊನೆಯವರೆಗೆ ಆಗಿರುವ ಮಳೆಯ ಪ್ರಮಾಣ ಕಳೆದ ವರ್ಷ ಈ ಅವಧಿಯಲ್ಲಿ ಆಗಿದ್ದರ ಅರ್ಧದಷ್ಟು ಮಾತ್ರ ಆಗಿದೆ. ಅದರಲ್ಲೂ ಭತ್ತದ ಬೇಸಾಯ ತೀವ್ರಗತಿಯಲ್ಲಿ ಸಾಗಬೇಕಾಗಿದ್ದ ಜುಲೈ ತಿಂಗಳಲ್ಲಿ ಸರಾಸರಿ 3 ರಿಂದ 5 ಅಂಗುಲದೊಳಗೆ ಮಾತ್ರ ಆಗಿದೆ.

ಮಳೆಯಾದರೂ ಮುಂದಿನ ದಿನಗಳಲ್ಲಿ ಬೀಳುವ ನಿರೀಕ್ಷೆ ಇಟ್ಟುಕೊಂಡಿರುವ ರೈತರು, ಜಲದ ಕಣ್ಣು ಇನ್ನೂ ಒಡೆಯದಿರುವ ಬಗ್ಗೆ ಕಂಗಾಲಾಗಿದ್ದಾರೆ. ಜೂನ್-ಜುಲೈನಲ್ಲಿ ಅತಿ ಅಬ್ಬರದಿಂದ ಮಳೆ ಗಾಳಿಗೆ ಜಲ ಒಡೆಯುತ್ತಿದ್ದು, ಅನಂತರ ಮಳೆ ಕಡಿಮೆಯಾದರೂ ನೀರು ಕಡಿಮೆಯಾಗದೆ; ಶೇ. 90ರಷ್ಟು ತರಿ ಜಮೀನು ಸಾಗುವಳಿಯಾಗುತ್ತಿತ್ತು. ಈ ಬಾರಿ ತಗ್ಗಿನ ಕೆಲವು ಗದ್ದೆಗಳು ನಾಟಿಯಾಗಿದ್ದು, ಬಿಟ್ಟರೆ ನೀರಾವರಿ ಎನ್ನಿಸಿಕೊಳ್ಳುವ ಗದ್ದೆಗಳೂ ಸಹ ಆಕಾಶ ನೋಡುವಂತಾಗಿದೆ. ಸಸಿರೆ ದಿನವಾಗಿ ಗಣ್ಣು ಬಂದಿದ್ದರೂ ನಾಟಿ ಮಾಡಲಾಗದೆ ಸಸಿ ಹಾಳಾಗುತ್ತಿದೆ. ಇಲ್ಲೇ ಹೀಗಾದರೆ ಇನ್ನು ಬಯಲುಸೀಮೆಯ ಪಾಡೇನು ಎಂಬ ಆತಂಕದ ಜೊತೆಗೆ ಮಲೆನಾಡಿನಲ್ಲಿ ಕೂಡ, ಮುಂದಿನ ವರ್ಷ ಬಡವರು ತಿನ್ನುವುದೇನು? ಎಂಬ ಭಯ ಎಲ್ಲೆಡೆ ಆವರಿಸಿದೆ.

ಕೊಪ್ಪ, ನ. ರಾ. ಪುರ, ತೀರ್ಥಹಳ್ಳಿ, ಮೂಡಿಗೆರೆ ಮುಂತಾಗಿ, ಮಲೆನಾಡಿನ ಇತರ ತಾಲ್ಲೂಕುಗಳ ಪರಿಸ್ಥಿತಿ ಕೂಡ ಇಷ್ಟೇ ಅಥವಾ ಇದಕ್ಕಿಂತಲೂ ಶೋಚನೀಯವಾಗಿದೆ. ಬಹುಶಃ ಇತಿಹಾಸದಲ್ಲೇ ಮೊದಲ ಬಾರಿಗೆ ಈ ತಾಲ್ಲೂಕುಗಳನ್ನೂ ಸಹ "ಬರ ಪೀಡಿತ ಪ್ರದೇಶ"ವೆಂದು ಘೋಷಿಸಬೇಕೆಂಬ ನಿರ್ಣಯಗಳನ್ನು ಮಂಡಲ ಪಂಚಾಯ್ತಿಗಳು ಕೈಗೊಳ್ಳುತ್ತಿವೆ.

## ಅನಾವೃಷ್ಟಿ : ಬೆಳೆ ಬದಲಿಗೆ ಸಲಹೆ

ಕೊಪ್ಪ, ನರಸಿಂಹರಾಜಪುರ ಮತ್ತು ಶೃಂಗೇರಿ ತಾಲ್ಲೂಕುಗಳಲ್ಲಿ ಜುಲೈ ತಿಂಗಳ ಮೊದಲ ವಾರದಿಂದಲೂ ಮಳೆ ಬಾರದ್ದರಿಂದ ಕೇವಲ ತಗ್ಗಿನ ಗದ್ದೆಗಳಲ್ಲಿ ಮಾತ್ರ ಭತ್ತದ ಬೆಳೆಯ ನಾಟಿಯಾಗಿದ್ದು, ಮುಂದೆ ಸಹ ಮಳೆ ಬಾರದಿದ್ದರೆ ನಾಟಿಯಾಗಿರುವ ಬೆಳೆಗೂ ನೀರಿನ ಕೊರತೆ ಉಂಟಾಗುವುದಲ್ಲದೆ ಮೇಲಿನ ಹಾಗೂ ನಡುವಿನ ಗದ್ದೆಗಳಲ್ಲಿ ಭತ್ತದ ಬೆಳೆ ತೆಗೆದುಕೊಳ್ಳುವುದು ಅಸಾಧ್ಯವಾಗುತ್ತದೆ.

ಇಂತಹ ಪರಿಸ್ಥಿತಿಯಲ್ಲಿ ರೈತ ಬಾಂಧವರು ಬೆಳೆ ಬದಲಾವಣೆ ಮಾಡಿ, ಅಲ್ಪ ತೇವಾಂಶದಿಂದ ಬೆಳೆಯಬಹುದಾದ ಮುಸುಕಿನ ಜೋಳ, ಅಲಸಂದೆ, ಹೆಸರು, ಹುರುಳಿ, ಎಳ್ಳು, ಸೂರ್ಯಕಾಂತಿ—ಈ ಬೆಳೆಗಳನ್ನು ಯಶಸ್ವಿಯಾಗಿ ಬೆಳೆದುಕೊಳ್ಳಬಹುದು. ಈ ಬೆಳೆಗಳಿಗೆ ಈಗಿರುವ ತೇವಾಂಶದ ಜೊತೆಗೆ 2-3 ಸಾಧಾರಣ ಮಳೆ ಬಂದರೆ ಸಾಕಾಗುತ್ತದೆ. ರೈತರು ಈ ಬೆಳೆಗಳ ಬಗ್ಗೆ ತಾಂತ್ರಿಕ ಸಲಹೆಗಳಿಗಾಗಿ ಹಾಗೂ ಈ ಬೆಳೆಗಳ ಬೀಜದ ಪೂರೈಕೆಗಾಗಿ ಹತ್ತಿರದ ಕೃಷಿ ಸಹಾಯಕರನ್ನಾಗಲಿ ಅಥವಾ ತಾಲ್ಲೂಕಿನ ಸಹಾಯಕ ಕೃಷಿ ನಿರ್ದೇಶಕರನ್ನಾಗಲಿ ಸಂಪರ್ಕಿಸಬೇಕೆಂದು ಕೋರಲಾಗಿದೆ.

ನ.ರಾ. ಪುರ ತಾಲ್ಲೂಕಿನ ಮಂಡಲ ಪ್ರಧಾನರು – 7

ಬಿ. ಕಣಬೂರು (ಬಾಳೆಹೊನ್ನೂರು ಮಂಡಲ)

# ಜನತಾಕ್ಕೆ ಕಗ್ಗಂಟಾದ ಕಗ್ಗನಗದ್ದೆ ವೆಂಕಟೇಶ್

ಕಗ್ಗನಗದ್ದೆಯ ಚಂದ್ರಯ್ಯ ಗೌಡರ ಮಗ ಕೆ. ಸಿ. ವೆಂಕಟೇಶ್ ವಿದ್ಯಾವಂತ ಯುವಕ. ಜನತಾ ಪಕ್ಷದಿಂದ ಮಂಡಲ ಸದಸ್ಯರಾಗಿ ಆಯ್ಕೆಗೊಂಡು ಈ ಮಂಡಲದ ಪ್ರಧಾನರ ಆಯ್ಕೆಯಲ್ಲಿ 'ಬಂಡಾಯ ಅಭ್ಯರ್ಥಿ' ಎಂಬ ಅಡ್ಡನಾಮವನ್ನು ಪತ್ರಿಕೆಗಳಲ್ಲಿ ಪಡೆದು ಪ್ರಧಾನರಾದ ಇವರಿಗೆ, ಬಂಡಾಯದಿಂದಲಾದರೂ ಪಡೆದ ಈ ಪದವಿಯ ಯಶಸ್ವಿ ನಿರ್ವಹಣೆಯಲ್ಲಿ ಶುಭಕೋರುತ್ತಾ........

(ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯ ಬಿಲ್ ಹಿಂಭಾಗದಲ್ಲಿ ಸೂಚನೆಯೊಂದಿತ್ತು: "ತಪ್ಪು–ಒಪ್ಪುಗಳಿಂದ ಹೊರತು ಪಡಿಸಿ" ಎಂದು. ತಪ್ಪುಗಳಿಂದ ಹೊರತುಪಡಿಸುವುದು ಸರಿ; ಒಪ್ಪುಗಳಿಂದಲೂ ಹೊರತು ಪಡಿಸಿ ಎಂದರೆ? ಅರ್ಥಾತ್ ಈ ಬಿಲ್ ಸರಿಯಿಲ್ಲ ಎಂದು. ಆದರೆ ಈ ಲೇಖನದ ಅಣಕವನ್ನು ತಪ್ಪಿನಿಂದ ಮಾತ್ರ ಹೊರತು ಪಡಿಸಿ. ಏಕೆಂದರೆ ಈ ತಾಲ್ಲೂಕಿನ ಅನೇಕ ಪ್ರಧಾನರು ನರಸಿಂಹರಾಜಪುರದಲ್ಲಿ ಭೇಟಿಯಾಗಿದ್ದರು. ಇನ್ನುಳಿದವರಿಗೆ, ಪ್ರಧಾನರ ಪರಿಚಯದ ಲೇಖನಕ್ಕಾಗಿ ವಿವರಗಳನ್ನು ಕೋರಿ ಪತ್ರ ಬರೆದಿದ್ದೆ. ಅಂತೆಯೇ ಈ ಪ್ರಧಾನರಿಗೂ ಬರೆದಿದ್ದೆ ಹಾಗೂ ಬಾಳೆಹೊನ್ನೂರಿನ ಮಂಡಲ ಕಛೇರಿಗೂ ಭೇಟಿ ನೀಡಿದ್ದೆ. ಅಲ್ಲಿಯೂ ಇವರ ಭೇಟಿಯಾಗಲಿಲ್ಲ ಹಾಗೂ ಇವರಿಂದ ಯಾವ ಉತ್ತರವೂ ಬರಲಿಲ್ಲ. ಹಾಗಾಗಿ "ತಪ್ಪುಗಳಿಂದ ಹೊರತು ಪಡಿಸಿ" ಎಂದದ್ದು.)

ಮಂಡಲದ ಸದಸ್ಯ ಚುನಾವಣೆಯಲ್ಲಿ ಜನತಾದಿಂದ ಸ್ಪರ್ಧಿಸಿ ಕಾಂಗ್ರೆಸ್‌ನ ಹಳೇ ಹುಲಿ ಕೆ.ಟಿ. ಚಿನ್ನಯ್ಯ ಗೌಡರನ್ನು ಸೋಲಿಸಿದ್ದು ಒಂದು ಬಹುದೊಡ್ಡ ಸಾಧನೆ ಎಂಬಂತೆ ಜನತಾದ ಕೆಲ ಹುರಿಯಾಳುಗಳು ಈ ವೆಂಕಟೇಶರ ಹೆಸರನ್ನು ಪ್ರಧಾನ ಪಟ್ಟಕ್ಕೊ ಎತ್ತಿ ಹಿಡಿದ "ಒಂದು ಹಠ" ಚುನಾವಣೆಯಲ್ಲಿ ಚಲಾವಣೆಯಾಯಿತು.

ಪ್ರಧಾನರ ಚುನಾವಣೆಗೆ ಮುಂಚೆ ಈ ಮಂಡಲದ ಜನತಾದ ಹಿರಿಯ ಸದಸ್ಯ ಕೃಷ್ಣಸ್ವಾಮಿಯವರನ್ನು ಪ್ರಧಾನ ಪಟ್ಟಕ್ಕೆ ಜನತಾ ಅಭ್ಯರ್ಥಿಯಾಗಿ ಆಯ್ಕೆ ಮಾಡಲಾಗಿದ್ದು ಒಂದು ದಿನ ಉರುಳುವುದರೊಳಗಾಗಿ ಕೃಷ್ಣಸ್ವಾಮಿಯವರನ್ನೇ ಉರುಳಿಸಿ, ವೆಂಕಟೇಶರನ್ನು ಬಂಡಾಯವೆಬ್ಬಿಸಿ ಹಿಂಭಾಗದಿಂದ ಬೆಂಬಲಿಸಿದ ಕೀರ್ತಿ ತಾಲ್ಲೂಕ್ ಜನತಾಧ್ಯಕ್ಷರಿಗೆ ಮತ್ತು ಈ ಮಂಡಲದ ಜನತಾ ಘಟಕದ ಕೆಲ ಮುಂದಾಳುಗಳಿಗೆ ಸಲ್ಲುತ್ತದೆಂದು ಜನರಾಡಿಕೊಳುತ್ತಿದ್ದಾರೆ. ಈ ಪ್ರಧಾನರ ಚುನಾವಣೆಯಲ್ಲಿ ಕಾಂಗ್ರೆಸ್ ಕೂಡ "ಹಾವು ಸಾಯಬಾರದು–ಕೋಲು ಮುರಿಯಬಾರದು" ಎನ್ನುವಂತೆ ವೆಂಕಟೇಶ್ ಮತ್ತು ಕೃಷ್ಣಸ್ವಾಮಿಯವರಿಗೆ ತಲಾ ಎರಡೆರಡು ಮತ ನೀಡಿತು. ಅರ್ಥಾತ್ ಕೃಷ್ಣಸ್ವಾಮಿಯವರು ಬೇಕು. ಆದರೆ ಸೋತಿರಬೇಕು!?

ಈ ಮಂಡಲದ ಕೇಂದ್ರ ಸ್ಥಳ ಬಾಳೆಹೊನ್ನೂರಿನಲ್ಲಿ ಪ್ರಮುಖ ಸಮಸ್ಯೆಗಳು ವಿದ್ಯುತ್ (ಮುವತ್ತುದಿನಗಳಲ್ಲಿ ಇಪ್ಪತ್ತೈದು ದಿನಗಳು ಮಾತ್ರ ಇರಬೇಕು. ಏಕೆಂದರೆ ವಿದುತ್‌ದರ ಜಾಸ್ತಿ ಆದ್ದರಿಂದ ಜನಕ್ಕೆ ಹೊರೆಯಾಗಬಾರದು); ಬೀದಿಗಳ ನೈರ್ಮಲ್ಯ (ಆರೋಗ್ಯ ಹೆಚ್ಚಿಗೆ ಕಾಪಾಡಿಕೊಳ್ಳಬಾರದು, ವೈದ್ಯರ ಸಂಖ್ಯೆ ಜಾಸ್ತಿಯಾಗಿದೆ); ನೀರು (ಭದ್ರಾನದಿ ಪಕ್ಕದಲ್ಲಿದೆ, ಸ್ವಲ್ಪ ದೂರ ನಡೆದು ತಂದರೆ ವ್ಯಾಯಾಮವಾಗುತ್ತದೆ); ಬಸ್ ನಿಲ್ದಾಣದ ಮೂತ್ರಿಗಳು ನಾರುವಿಕೆ (ರಾಜಕೀಯ ಪಕ್ಷಗಳು, ವ್ಯಕ್ತಿಗಳೇ ಈ ಪಾಟ ನಾರುತ್ತಿರುವಾಗ ಮೂತ್ರಿಗಳು ತಮ್ಮ ಹುಟ್ಟು ಗುಣ ಬಿಟ್ಟುಕೊಟ್ಟಾವೆ?)– ಹೀಗೆ ಹಲವು ಹತ್ತು ಸಮಸ್ಯೆಗಳು ಹಲವು ಹತ್ತು ಇಲಾಖೆಗಳ

(3ನೇ ಪುಟಕ್ಕೆ)

ಪದ್ಯದಂಕಣ

## ಶೂನ್ಯ

ಸೋವು, ನಲಿವು
ಜೀವನ್ಮರಣ
ಅಚೇತನದೊಂದಿಗೆ
ಸರಸ–ಸಲ್ಲಾಪದಿ
ಹೆಡೆ ತುಳಿದ ನಾಗರೆದಂತೆ
ಬುಸುಗುಟ್ಟಿ ಕಚ್ಚಬಂದಂತೆ,
ಕಡಲ ಅಲೆ ಬತ್ತಿತೋ
ಅಲೆ ಮೇಲೇರಿ ಬಂತೋ–
ಏನೊಂದೂ ಅರ್ಥವಾಗದೆ
ದಿಗ್ಭ್ರಮೆಯಿಂ ದೃಷ್ಟಿಸಿ
ಸೃಷ್ಟಿಸಹಜ ಮಾನವನಾಸೆ
ಆಕಾಂಕ್ಷೆಗಳಿಗೆ ಕಡಿವಾಣ
ವಿಲ್ಲವೆನ್ನುವುದರ್ಥವಾದಾಗ,
ಕಾಣುವುದು ಜಗತ್ತು
ಶೂನ್ಯ–ಬರಿ ಶೂನ್ಯ

—ಸರೋಜ ವೈ. ಜಿ
ಯಡಗೆರೆ

## ಭೋರ್ಗರೆವ ತುಂಗೆ

ಅಲೆ–ಅಲೆಯಾಗಿ
ನೀ ಹರಿದು ಹೋಗುವೆ
ಕಸ ಕಡ್ಡಿಗಳನು
ಜೊತೆಯಲ್ಲಿ ಒಯ್ಯುವೆ
ಗಿಡ–ಪೊಟರೆಗಳೆನ್ನದೆ
ನೀ ಹಾದು ಹೋಗುವೆ
ಮರದಿನ್ನೆಗಳನ್ನು
ಜೊತೆಯಲ್ಲಿ ಕರೆಯುವೆ
ಬಂಡೆಗಲ್ಲುಗಳಿಗೆ
ಅಪ್ಪಳಿಸಿ ಹರಿಯುವೆ
ಭೋರ್ಗರೆಯುತ್ತ
ಹಾಡನ್ನು ಹಾಡುತ್ತ
ನೀ ಹೋಗುವುದನ್ನು
ನೋಡುತ್ತಾ ನಿಂತರೆ
ಆಹಾ ಎಷ್ಟು ಚೆಂದ
ಎಷ್ಟು ಅಂದ
ನಿನ್ನ ಈ ಯೌವನ!

—ಎಸ್. ಆರ್. ಉಷಾ,
6ನೇ ತರಗತಿ,
ಶಾನುವಳ್ಳಿ

## ಏ ಗಿಣಿಯೇ ಬಾ ಗಿಣಿಯೇ

ಏ ಗಿಣಿಯೇ ಬಾ ಗಿಣಿಯೇ
ನನ್ನಲ್ಲಿ ಮಾತನಾಡು
ನಿನ್ನ ಬಣ್ಣ ಎಷ್ಟು ಅಂದ
ನಿನ್ನ ಧ್ವನಿ ಎಷ್ಟು ಚಂದ
ನನಗೂ ನಿನ್ನಂತೆ ಹಾರಲು ಕಲಿಸು
ರೆಕ್ಕೆ ಪುಕ್ಕ ಬಂದ ಮೇಲೆ
ನಾನೂ ಮರವನ್ನು ಸೇರುವೆ
ಹಣ್ಣು ತಿಂದು ನೀರು ಕುಡಿದು
ವನದಲ್ಲಿ ವಾಸಿಸುವೆ
...ರದ ಗುಹೆಯನ್ನು ನೋಡುವೆ
ಚಿತ್ರದುರ್ಗದ ಕೋಟೆಯಲ್ಲಿ ನುಸಿಯುವೆ
ಕಾಳನು ಹುಡುಕುವೆ
ಆಕಾಶದಲ್ಲಿ ಹಾರುವೆ
ಏ ಗಿಣಿಯೇ ಬಾ ಗಿಣಿಯೇ .
ನನ್ನಲ್ಲಿ ಮಾತನಾಡು.

ಟಿ. ಆರ್. ಸುರೇಶ
6ನೇ ತರಗತಿ, ಕೊಪ್ಪ

# ಮೂರ್ಖರಿಗೆ ಬುದ್ಧಿ ಹೇಳುವುದು ವ್ಯರ್ಥ

ಮಕ್ಕಳೇ, ಈಗ ನಿಮಗೊಂದು ಕತೆ ಹೇಳ್ತೀನೆ. ಒಂದು ಕಾಡು. ಆ ಕಾಡ್ನಲ್ಲಿ ಒಂದ್ ಮಂಗಗಳ ಹಿಂಡಿತ್ತು. ಹಿಂಡಿನಲ್ಲಿ ಕೆಲವು ನೂರು ಮಂಗಗಳಿದ್ದವು. ಅವುಗಳು ಒಮ್ಮೆ ಕಾಡ್ನಲ್ಲಿ ಏನೋ ಹಣ್ಣು ಹಂಪಲು ಆಹಾರ ಹುಡುಕ್ತಾ ತಿರುಗ್ತಾ ಸುತ್ತಾಡ್ತಿದ್ದಾಗ ಅನಿರೀಕ್ಷಿತವಾಗಿ ಒಂದು ಮಳೆ ಬಂದು ಬಿಡ್ತು. ಪಾಪ! ಮಳೆಯನ್ನು ನಿರೀಕ್ಷಿಸಿರದಿದ್ದ ಮಂಗಗಳು ಸುರಕ್ಷಿತ ಸ್ಥಾನ ಸೇರಲಾರದೇ ಮಳೆಗೆ ಸಿಕ್ಕಿ ನೆನೆದು ಹೋದವು. ಮಳೆ ಬಿಟ್ಟ ಕೂಡಲೇ ಚಳಿಯಿಂದ ಗಡಗಡ ನಡುಗುತ್ತಿದ್ದ ಅವುಗಳಿಗೆ ದೂರದಲ್ಲಿ ಗುಲಗಂಜಿ ಕಾಯಿಯ ಗೊಂಚಲುಗಳು ಬಿದ್ದದ್ದು ಕಾಣಿಸಿತು. ಅವುಗಳು ಅದನ್ನೇ ಬೆಂಕಿಯ ಕಿಡಿಗಳೆಂದು ಭ್ರಮಿಸಿ ಅದರ ಸುತ್ತಾ ಕುಳಿತುಕೊಂಡವು.

ಇದನ್ನೆಲ್ಲಾ ನೋಡುತ್ತಿದ್ದ ಒಂದು ಜಾಣ ಹಕ್ಕಿ ಅವುಗಳ ಬಳಿ ಬಂದು, "ಅಯ್ಯೋ, ಮಂಗಗಳ್ರಾ, ಈ ಗುಲಗಂಜಿ ಕಾಯಿಯ ಮುಂದೆ ಸುಮ್ಮನೆ ನಡುಗ್ತಾ ಯಾಕೆ ಕುಳಿತುಕೊಂಡಿದ್ದೀರಿ. ನೀವು ಇಲ್ಲಿ ಎಷ್ಟು ಹೊತ್ತು ಕುಳಿತರೂ ನಿಮ್ಮ ಮೈ ಬೆಚ್ಚಗಾಗುವುದಿಲ್ಲ ಅಲ್ಲದೆ ಈಗ ಮತ್ತೆ ಮಳೆ ಬರುವ ಸೂಚನೆಯೂ ಕಾಣಿಸುತ್ತಿದೆ. ಆದ್ದರಿಂದ ಎಲ್ಲಾದರೂ ಸುರಕ್ಷಿತ ಜಾಗ ಸೇರಿಕೊಳ್ಳಿ" ಎಂದು ಹೇಳಿತು.

ಆದರೂ ಅವು ಅಲ್ಲಿಂದ ಕದಲಲಿಲ್ಲ. ಆ ಹಕ್ಕಿ ಮತ್ತೆ ಮತ್ತೆ ಅದನ್ನೇ ಹೇಳಿತು. (ಅವುಗಳ ಮೇಲಿನ ಕರುಣೆಯಿಂದ). ಕೊನೆಗೆ ಆ ಮಂಗಗಳಿಗೆ ಬುದ್ಧಿ ಬರುವ ಬದಲು ಆ ಹಕ್ಕಿಯ ಮೇಲೆ ಸಿಟ್ಟಾಗಿ ಎಲ್ಲವೂ ಸೇರಿ ಅದನ್ನು ಅಲ್ಲಿಂದ ಓಡಿಸಿದವು.

ಇದರ ನೀತಿ ಏನೂಂದ್ರೆ ಮೂರ್ಖರಿಗೆ ಬುದ್ಧಿಹೇಳಲು ಹೋಗಬಾರ್ದು ಅಂತ.

ಇದಿಷ್ಟು ಪಂಚತಂತ್ರದ ಕಥೆ ಅನ್ನಿ. ಆದರೆ ಮಕ್ಕಳೇ, ನೀವೀಗ ಯೋಚ್ನೆ ಮಾಡಿ. ಆ ಮಂಗಗಳು ಹಕ್ಕಿಯನ್ನು ಓಡಿಸಿದ್ದು ಸರಿಯೆ? ಹಾಗೆ ಓಡಿಸಿದ ಮಾತ್ರಕ್ಕೆ ಅವುಗಳ ಚಳಿ ಹೋಯಿತೆ? ಅಥವಾ ಆ ಹಕ್ಕಿ ಅವುಗಳಿಗೇ ಉಪಯೋಗವಾಗಲೆಂದು ಬುದ್ಧಿ ಹೇಳಲು ಹೋಗಿದ್ದು ತಪ್ಪೆ?

(ಕಥೆ ಹೇಳಿದವರು : ಕಣ್ಣ ಚಿಕ್ಕಪ್ಪ)

## ಜಾಣ ಪ್ರಶ್ನೆಗಳಿಗೆ ಉತ್ತರಗಳು

1. ಹೋಗುವಾಗ 5, ಬರುವಾಗ 15, ಏನದು?

ಏಡಿ ಹಿಡಿಯಲು ಕುಣಿಗೆ ಹೋಗುವ ಕೈಯ ಬೆರಳು 5, ಏಡಿ ಹಿಡಿದು ತರುವಾಗ ಅದರ 10 ಬೆರಳು ಸೇರಿ 15.

2. ಅತ್ಯಂತ ಪ್ರಾಚೀನ ನಾಗರಿಕತೆ– ಈಜಿಪ್ಟ್ ದೇಶದ ನಾಗರಿಕತೆ.

3. ದ್ರಾಕ್ಷಿ ಹಣ್ಣಿನ ಮಾದಕ ಪಾನೀಯವನ್ನು ಮೊದಲು ತಯಾರಿಸಿದ ದೇಶ– ಚೀನಾ.




4. 'ತೂಗಾಡುವ ತೊಟ್ಟಿಲ'ನ್ನು ಸ್ಥಾಪಿಸಿದವನು— ಬ್ಯಾಬಿಲೋನಿಯದ ದೊರೆ ನೆಬು ಖಡ್ನೇಜರ್.

5. ಅತ್ಯಂತ ದೊಡ್ಡ ಪಿರಮಿಡ್— ಈಜಿಪ್ಟ್‌ನ ಗಿಜಾದಲ್ಲಿದೆ. ಇದು ಚಿಯೋಪ್ ಕುಪ್ಸ ಅರಸನದು.

[ಈ ಬಾರಿ ಯಾವ ಮಕ್ಕಳೂ 'ಜಾಣ ಪ್ರಶ್ನೆ'ಗಳಿಗೆ ಉತ್ತರಿಸಿಲ್ಲ. 'ಜಾಣ ಪ್ರಶ್ನೆ'ಗಳು ಜಾಣರಿಗೆ ಇರಲಿ. ನಮಗೇಕೆ? ಎನ್ನುತ್ತೀರಾ? ಯಾಕೆ ಮಕ್ಕಳೆ, ಕತೆ ಕೇಳುವುದು ಮಾತ್ರ ಇಷ್ಟವಾ? ಬುದ್ಧಿಗೆ ವ್ಯಾಯಾಮ ಕೊಡುವುದು ಕಷ್ಟವಾ? ಈ ಬಾರಿಯ ಪ್ರಶ್ನೆಗಳಿಗೆ ಜಾಣರಾಗಿರಿ ನೋಡೋಣ! —ಸಂಪಾದಕ]

## ಇನ್ನಷ್ಟು ಜಾಣ ಪ್ರಶ್ನೆಗಳು

1. ಮನುಷ್ಯರು ಯಾವಾಗ ಪ್ರಶಾಂತರಾಗಿರುತ್ತಾರೆ ?

2. ಇಟ್ಟು ಕೊಳ್ಳಬೇಕೆಂದರೂ ಇಟ್ಟು ಕೊಳ್ಳಲಾಗದುದು ಏನು ?

3. ನಿಲ್ಲೆಂದರೂ ನಿಲ್ಲದಿರುವುದು ಯಾವುದು ?

4. ರೇಡಿಯೋ ಕಂಡು ಹಿಡಿದವನು ಯಾರು ?

—ಸಂಗ್ರಹ: ಸತೀಶ ಎಂ. ಕೆ.
10ನೇ ತರಗತಿ, ಜಯಪುರ

# ದಲಿತರ ನರಮೇಧ ನಡೆದಂಥ ಆಂಧ್ರದ ಚಿರಾಲದಲ್ಲಿ ಚಿರಸ್ಮರಣೀಯ 'ವಿಜಯನಗರ'ವನ್ನು ಸ್ಥಾಪಿಸಿದ ದಲಿತ ಮಹಾ ಸಭಾ

1985ನೇ ಜುಲೈ 17 ರಂದು ನಮ್ಮ ಪಕ್ಕದ ರಾಜ್ಯವಾದ ಆಂಧ್ರ ಪ್ರದೇಶದ ಕಾರಂಚೇಡುವಿನಲ್ಲಿ ದಲಿತರು ಬಾವಿಯ ನೀರನ್ನು ಮುಟ್ಟಿದ್ದನ್ನು ಸಹಿಸದ ಅಲ್ಲಿನ ಮೇಲ್ಜಾತಿಯಾದ ಕಮ್ಮ ಜನಾಂಗದವರು ಗುಂಪು-ಗುಂಪುಗಳಾಗಿ ದಲಿತರ ಕೇರಿಗೆ ನುಗ್ಗಿ, ಹಾಲು ಕುಡಿಯುವ ಮುಗ್ಧ ಕಂದಮ್ಮಗಳಿಂದ ಹಿಡಿದು 80 ವರ್ಷದ ವೃದ್ಧರವರೆಗೆ ಎದುರು ಸಿಕ್ಕ ಸಿಕ್ಕವರನ್ನು ಕೊಡಲಿ, ಮಚ್ಚು, ದೊಣ್ಣೆಗಳಿಂದ ಥಳಿಸಿ ನರಮೇಧ ನಡೆಸಿದರು. ನೂರಾರು ಅಸಹಾಯಕ ದಲಿತರು ಕಿವಿ, ಕಣ್ಣು, ಮೂಗು, ಕೈ ಕಾಲುಗಳನ್ನು ಕಳೆದುಕೊಂಡು ಅಂಗವಿಕಲರಾದರೆ, ಎಂಟು ಜನ ಕೊಲೆಯಾದರು. ಇಬ್ಬರು ಮಹಿಳೆಯರ ಮೇಲೆ ಅತ್ಯಾಚಾರ; ಒಬ್ಬ ಗರ್ಭಿಣಿಯ ಹೊಟ್ಟೆಗೆ ಭರ್ಜಿಯಿಂದ ತಿವಿದು ಕರುಳು ಬಗೆಯಲಾಯಿತು.

ಈ ಮೇಲ್ಕಂಡ ದುರ್ಘಟನೆಯಿಂದ ಜಾಗೃತವಾದ ದಲಿತರ ಸ್ವಾಭಿಮಾನದ ಸಂಕೇತವಾಗಿ, ಕತ್ತಿ ಪದ್ಮರಾವ್, ಬೊಜ್ಜ ತಾರಕಂ ನೇತೃತ್ವದಲ್ಲೊಂದು "ಆಂಧ್ರ ದಲಿತ ಮಹಾಸಭಾ" ರೂಪುಗೊಂಡಿತು. ಆಂಧ್ರ ಸರ್ಕಾರದ ಮುಖ್ಯಮಂತ್ರಿ ಎನ್. ಟಿ. ರಾಮರಾವ್ ತಮ್ಮ ಜಾತಿಯ ಸಂಬಂಧಿಕರು ನಡೆಸಿದ ಹಲ್ಲೆಯನ್ನು ಮುಚ್ಚಿಹಾಕಲು 50 ಸಾವಿರ ರೂ. ಗಳ 'ಪರಿಹಾರ' ಘೋಷಣೆ ಮಾಡಿದರು. ಆದರೆ ಈ ಪರಿಹಾರವನ್ನು ತಿರಸ್ಕರಿಸಿ, ಕೊಲೆಗಡುಕರ ಮೇಲೆ ಕ್ರಮ ಜರುಗಿಸಲು ದಲಿತರು ಹೋರಾಟ ನಡೆಸಿದರು. ಅದನ್ನು ಹತ್ತಿಕ್ಕಲು ತನ್ನ ಬತ್ತಳಿಕೆಯಲ್ಲಿದ್ದ ತಂತ್ರಗಳನ್ನೆಲ್ಲ ಬಳಸಿತು ಸರ್ಕಾರ.

ಧೃತಿಗೆಡದ ದಲಿತರು ಎನ್. ಟಿ. ಆರ್. ಸರ್ಕಾರಕ್ಕೆ ಸವಾಲೆಸೆದು. ದಲಿತರ ಹಿತೈಷಿಗಳು, ಪ್ರಗತಿಪರ ಚಿಂತಕರ ನೆರವಿನಿಂದ ವಂತಿಗೆ ಸಂಗ್ರಹ ಮಾಡಿ, ಚಿರಾಲದಲ್ಲಿ ತಾವೇ ಸ್ವತಃ 50 ಎಕರೆ ಭೂಮಿ ಕೊಂಡುಕೊಂಡು, 470 ಆರ್.ಸಿ.ಸಿ. ಟೈಪು ಮನೆಗಳನ್ನು ನಿರ್ಮಿಸಿಕೊಂಡು, ಒಂದು ಸಣ್ಣ ಗುಡಿ ಕೈಗಾರಿಕೆ ಸ್ಥಾಪಿಸಿಕೊಂಡಿದ್ದಾರೆ. ಅದು "ವಿಜಯನಗರ"ವಾಗಿ ರೂಪುಗೊಂಡಿದೆ.

ಕಳೆದ ಎರಡು ವರ್ಷಗಳ ನಂತರ 1987 ಜುಲೈ 17 ರಂದು ಗತವಾದ ಘಟನೆಗಳನ್ನು ನೆನಪು ಮಾಡಿಕೊಳ್ಳುತ್ತಾ ಮುಗ್ಧ ದಲಿತರ ಎದೆಗೆ ಸ್ವಾಭಿಮಾನದ ಕಿಚ್ಚನ್ನು ಹೊತ್ತಿಸುವುದರೊಂದಿಗೆ ಅಂದು ಮಧ್ಯಾಹ್ನ 12 ಗಂಟೆಗೆ ಚಿರಾಲದಲ್ಲಿ 20 ಸಾವಿರ ಜನರ ಜೈಕಾರದೊಡನೆ 'ವಿಜಯನಗರ' ಉದ್ಘಾಟನೆಯಾಯಿತು. ಈ ಕಾರ್ಯಕ್ರಮದಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಒಂದು ಸಾವಿರಕ್ಕೂ ಹೆಚ್ಚು ಸದಸ್ಯರು ಭಾಗವಹಿಸಿದ್ದರು ಮಹಾರಾಷ್ಟ್ರ, ಆಂಧ್ರ ರಾಜ್ಯಗಳ ಎಲ್ಲೆಡೆಯಿಂದಲೂ ಪ್ರತಿನಿಧಿಗಳು ಬಂದಿದ್ದರು.

"ದಮನ-ದಬ್ಬಾಳಿಕೆಗಳು ಬದಲಾವಣೆಗಳನ್ನು ತಡೆಯಲಾರವು" ಎಂಬ ಡಾ|| ಅಂಬೇಡ್ಕರ್ ನುಡಿಯಂತೆ, ಆಂಧ್ರ ದಲಿತ ಮಹಾಸಭಾ, ಕರ್ನಾಟಕ ದಲಿತಸಂಘರ್ಷ ಸಮಿತಿಯಂಥ ಸಂಘಟನೆಗಳು ಶೋಷಿತ ದಲಿತರ ವಿಮೋಚನೆಗೆ ರಾಷ್ಟ್ರವ್ಯಾಪಿಯಾಗಿ ದಲಿತರಸ್ವಾಭಿಮಾನದ ಹೆಜ್ಜೆ ಹಾಕುತ್ತಿವೆ.

**ಹೋರಾಟದ ಸಾಗರದೊಡನೆ ಬಡವರೆಲ್ಲರೂ ಕೂಡಿ ಬನ್ನಿ.**

**- ಕರ್ನಾಟಕ ದಲಿತ ಸಂಘರ್ಷ ಸಮಿತಿ**

## 'ರೈತರ ಹಿತ ಕಾಯುವೆ': ನೂತನ ವ್ಯ.ಮಾ.ಸ. ಅಧ್ಯಕ್ಷರ ಭರವಸೆ

ಮಾನ್ಯರೆ,

ಜು. 29ರಂದು ನಡೆದ ಶಿವಮೊಗ್ಗ ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿ ಅಧ್ಯಕ್ಷರ ಚುನಾವಣೆಯಲ್ಲಿ ನನ್ನನ್ನು ಅವಿರೋಧವಾಗಿ ಅಧ್ಯಕ್ಷರಾಗಿ ಆಯ್ಕೆ ಮಾಡಿರುವುದಕ್ಕಾಗಿ ಸಮಿತಿಯ ಎಲ್ಲ ಸದಸ್ಯರಿಗೆ ಹೃತ್ಪೂರ್ವಕ ಕೃತಜ್ಞತೆ ಸಲ್ಲಿಸುತ್ತೇನೆ. **ಹಿಂದಿನ ಅಧ್ಯಕ್ಷರಾದ ದಿ|| ಕೆ. ಎನ್. ವೀರಪ್ಪಗೌಡರು ಹಾಕಿ ಕೊಟ್ಟ ದಾರಿಯಲ್ಲೇ ಸಂಸ್ಥೆಯನ್ನು ಮುನ್ನಡೆಸುವ ಹಾಗೂ ಎಲ್ಲ ರೈತ ಬಾಂಧವರ ಹಿತವನ್ನು ಕಾಯುವ ಮತ್ತು ಸಮಿತಿಯ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸುವ ಭರವಸೆ ನೀಡಿ** ನನ್ನ ಕಾರ್ಯದಲ್ಲಿ ಎಲ್ಲ ಸದಸ್ಯರ, ಅಭಿಮಾನಿಗಳ, ಪತ್ರಿಕಾ ಮತ್ತು ಸಮೂಹ ಮಾಧ್ಯಮಗಳ, ಅಧಿಕಾರಿಗಳ ಹಾಗೂ ಸಂಬಂಧಪಟ್ಟವರೆಲ್ಲರ ಸಹಕಾರ ಹಾಗೂ ಸಲಹೆ-ಸೂಚನೆಗಳನ್ನು ವಿನಂತಿಸುತ್ತೇನೆ.

—ಎಸ್. ಬಿ. ಕೃಷ್ಣಪ್ಪ,
ಶಿವಮೊಗ್ಗ

## ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿವೇತನಕ್ಕೆ ಅರ್ಜಿ ಆಹ್ವಾನ

ಚಿಕ್ಕಮಗಳೂರು: ವಿವಿಧ ಉದ್ದಿಮೆಗಳಲ್ಲಿ ದುಡಿಯುತ್ತಿರುವ ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿ ವೇತನವನ್ನು ನೀಡಲು ವೆಲ್‌ಫೇರ್ ಕಮಿಶನರ್, ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ. ವಿ ಐ ಎಸ್. ಎಲ್. ಕಟ್ಟಡ, ಬೆಂಗಳೂರು ಇವರು ಅರ್ಹ ವಿದ್ಯಾರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಿದ್ದಾರೆ. ಆಯಾ ತಾಲ್ಲೂಕಿನ ಕಾರ್ಮಿಕ ಇಲಾಖೆಯ ಕಛೇರಿಯಿಂದ ಅರ್ಜಿ ಫಾರಂ ಪಡೆಯಬಹುದಾಗಿದೆ.

ಹಿಂದಿನ ಪರೀಕ್ಷೆಯಲ್ಲಿ ವಿದ್ಯಾರ್ಥಿಯು ಕನಿಷ್ಠ ಶೇ. ೫೦ ಅಂಕಗಳನ್ನು ಪಡೆದಿರಬೇಕು (ಪರಿಶಿಷ್ಟ ಜಾತಿ ಹಾಗೂ ಪಂಗಡಗಳಿಗೆ ಶೇ. ೪೦). ಅಭ್ಯರ್ಥಿಯ ತಂದೆ/ಪೋಷಕರ ತಿಂಗಳ ವರಮಾನ ೧೬೦೦ರೂ. ಮೀರಿರಬಾರದು. ೮ ನೇ ತರಗತಿಯಿಂದ ಮೇಲ್ಪಟ್ಟು, ಪದವಿ ಹಾಗೂ ಸ್ನಾತಕೋತ್ತರ ತರಗತಿಗಳು ಹಾಗೂ ಎಲ್ಲಾ ರೀತಿಯ ತಾಂತ್ರಿಕ ಹಾಗೂ ವೃತ್ತಿ ಸಂಬಂಧವಾದ ಕೋರ್ಸ್‌ಗಳಲ್ಲಿ (ಶೀಘ್ರಲಿಪಿ, ಬೆರಳಚ್ಚು ತರಬೇತಿ, ನರ್ಸಿಂಗ್, ಫಾರ್ಮಸಿ, ಸೂಲಗಿತ್ತಿ ತರಬೇತಿ, ಉಪಾಧ್ಯಾಯ ವೃತ್ತಿ, ಕುಶಲ ಕಲೆ ಇತ್ಯಾದಿ) ಓದುತ್ತಿರುವ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸಬಹುದಾಗಿದೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ ಆಗಸ್ಟ್ ೩೧.

## 'ಪರಿಸರ ಸಮತೋಲನದಲ್ಲಿ ಅರಣ್ಯಗಳ ಪಾತ್ರ'

ಕಲ್ಲುಗುಡ್ಡೆ: ಇಲ್ಲಿನ ಹಿರಿಯ ಪ್ರಾಥಮಿಕ ಶಾಲೆ ಆವರಣದಲ್ಲಿ ಜು. 18 ರಂದು ವನಮಹೋತ್ಸವ ಕಾರ್ಯಕ್ರಮವನ್ನು ಶಾಸಕ ಗೋವಿಂದ ಗೌಡರು ಗಿಡ ನೆಡುವುದರೊಂದಿಗೆ ಉದ್ಘಾಟಿಸಿದರು. ಮಂಡಲ ಪಂಚಾಯ್ತಿ ಪ್ರಧಾನರಾದ ಬಿ. ಎಲ್. ಭಾಸ್ಕರ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಕೊಪ್ಪ ಉಪ ಅರಣ್ಯ ಸಂರಕ್ಷಣಾಧಿಕಾರಿ . ಕಿಶನ್ ಸಿಂಗ್ ಸುಗಾರ ಗ್ರಾಮಸ್ಥರಿಗೆ ಉಚಿತ ಸಸಿಗಳ ವಿತರಣೆ ಮಾಡಿದರು. ಎ.ಎಂ. ಅನಂತ ದಾಸ್, ಕೆ.ಆರ್. ದೇವೇಂದ್ರ. ಜಿ.ಕೆ. ಶಿವಶಂಕರ್, ಬಿ. ರಮೇಶ ರಾವ್, ಜಿ. ಸಿ. ಗೋಪಾಲಕೃಷ್ಣ, ಬಿ. ಕೆ. ವೆಂಕಪ್ಪಯ್ಯ ಮುಖ್ಯ ಅತಿಥಿಗಳಾಗಿದ್ದರು.

(4ನೇ ಪುಟಕ್ಕೆ)

## "ಮಕ್ಕಳಿಗೆ ಮರ ಗಿಡಗಳ ಬಗ್ಗೆ ಶಾಲೆಯಿಂದಲೇ ಪ್ರೀತಿ ಹುಟ್ಟಿಸಿ"

ಶೃಂಗೇರಿ: ಪ್ರಾಥಮಿಕ ಶಾಲೆಯ ಹಂತದಿಂದಲೇ ಮಕ್ಕಳಿಗೆ ಮರಗಿಡಗಳ ಬಗ್ಗೆ ತಿಳುವಳಿಕೆ, ಪ್ರೀತಿ ಹುಟ್ಟುವಂತೆ ಮಾಡಿದರೆ ಅವರು ಪ್ರಬುದ್ಧರಾಗುವ ವೇಳೆಗೆ ಅವರದೇ ಆದ ಮರಗಳು ಅವರ ಉಪಯೋಗಕ್ಕೆ ನಿಲ್ಲುತ್ತವೆ ಎಂದು ಶಾಸಕ ಗೋವಿಂದ ಗೌಡರು ಹೇಳಿದರು.

ಇಲ್ಲಿಗೆ ಸಮೀಪದ ಕುಂಚೆಬೈಲಿನ ಶಾಲಾ ವನದಲ್ಲಿ ಜು.19 ರಂದು ವನಮಹೋತ್ಸವವನ್ನು ಉದ್ಘಾಟಿಸಿ ಮಾತನಾಡುತ್ತಿದ್ದ ಅವರು ಬೇಲಿಗೆ ಮರದ ಮುಂಡಿನ ಬದಲು ಕಲ್ಲು ಮುಂಡುಗಳನ್ನು ಬಳಸುವುದರಿಂದ ಕಾಡಿನ ನಾಶವೂ ಕಡಿಮೆಯಾಗುತ್ತದೆ, ಕಲ್ಲು ಮುಂಡು ಮುಂದೆಯೂ ಉಪಯೋಗಕ್ಕೆ ಬರುತ್ತದೆ ಎಂದರು.

ಇಂದು ಎಲ್ಲಾ ರಂಗದಲ್ಲೂ ಮಿತಿಮೀರಿ ವ್ಯಾಪಿಸುತ್ತಿರುವ ಭ್ರಷ್ಟತೆಯಿಂದಾಗಿ ಕಾಡೊಂದೇ ಅಲ್ಲ, ಎಲ್ಲವೂ ನಾಶವಾಗುತ್ತಿದ್ದು,

(4ನೇ ಪುಟಕ್ಕೆ)

# ಜನತಾಕ್ಕೆ ಕಗ್ಗಂಟಾದ ಕೆ. ಸಿ. ವೆಂಕಟೇಶ್

(2ನೇ ಪುಟದಿಂದ)

ಕೈವಾಡದಲ್ಲಿವೆ. ದೀಪ ಹೋಯ್ತು, ಕತ್ತಲೆಯಾಯ್ತು- ಕಗ್ಗನಗದ್ದೆ ಹುಡುಗ ಕಾಲಿಟ್ಟ ಗಳಿಗೆ........! ಮೂತ್ರಿ ನಾರುತ್ತಿದೆ- ಈ ಪ್ರಧಾನ ಬಂದ ಗಳಿಗೆ....!! ಸರ್ಕಾರಿ ಬಸ್ ತಡವಾಗಿ ಬರ್‍ತಾ ಇದೆ-ಈ ಪ್ರಧಾನ....!!! ಹೀಗೆ ಎಲ್ಲಕ್ಕೂ ಕಾರಣೀಭೂತರಾಗುವ ಈ ಪ್ರಧಾನ ಪಟ್ಟ ಮುಳ್ಳಿನ ಮಂಚಿಗೆ ಇದ್ದಂತೆ. ಮುಳ್ಳು ಚುಚ್ಚಿಸಿಕೊಂಡು ಗಟ್ಟಿಯಾದ ಮೇಲೆ ಯಾವುದೇ ಚುನಾವಣೆ ಬಂದರೂ ಬೆಂಬಲಿಗರಿಲ್ಲದೆ ಬಂಡಾಯವೇಳಬಹುದು!

ನಾಮಿಕವಾಗಿಯಾಗಲೀ, ಅನಾಮಿಕವಾಗಿಯಾಗಲೀ, ಈ ಪ್ರಧಾನರ ಬಗ್ಗೆ ಲೋಪದೋಷಗಳು ಕೇಳಿಬರುವುದಿಲ್ಲ. ಹುರುಪಿನಿಂದ ಬಂದ ಹುಡುಗರಿಂದ ಪ್ರಗತಿಯ ಕೆಲಸ ಕಾರ್ಯಗಳಿಗೆ ಸಲಹೆ-ಸಹಕಾರ ನೀಡಿ ಉತ್ತಮ ಕಾರ್ಯ ಸಾಧನೆ ಮಾಡಿಕೊಳ್ಳುವುದರಲ್ಲಿ ಒಳಿತಿದೆ. ಮಂದಾಳುಗಳು ಮಾಡೋ ಮುಠ್ಠಾಳ ಕೆಲ್ಸಕ್ಕೆ ಹುರುಪಿನ ಹುಡುಗರನ್ನ ಬಲಿಪಶುಗಳನ್ನಾಗಿ ಮಾಡುವುದು ಸಮಾಜಕ್ಕೆ ಮಾರಕವಾದೀತು.

ಜನತಾ ಸ್ಪರ್ಧಿ ಕೃಷ್ಣಸ್ವಾಮಿಯವರನ್ನು ಬೆಂಬಲಿಸದಿರಲು "ಕೃಷ್ಣಸ್ವಾಮಿಯವರ ಕೈ ಬಾಯಿ ಅಶುದ್ಧ" ಎಂಬ ಮಾತು ಪ್ರತಿಧ್ವನಿಸುತ್ತದೆ. ಕಚ್ಚೆ, ಕೈ, ಬಾಯಿಗಳು ಸರಿಯಿಲ್ಲದ ಮಂತ್ರಿ ಶಾಸಕರುಗಳಿರುವಾಗ, ಅದರಲ್ಲಿಯೂ ಮುಸ್ಲಿಂ ರಾಷ್ಟ್ರಗಳಲ್ಲಿರುವಂತೆ ಅಶುದ್ಧ ಗುಣದವರ ಕೈ ಕತ್ತರಿಸುವ ಶಿಕ್ಷೆ ನಮ್ಮ ದೇಶದಲ್ಲಿಯೂ ಇದ್ದಿದ್ದರೆ ಶೇಕಡ 50 ಭಾಗ ಮುಂಡುಗೈನ ಪ್ರಧಾನರನ್ನು, ಜುಬ್ಬದಲ್ಲಿ ಮುಂಡುಗೈ ಮುಚ್ಚಿಕೊಳ್ಳುವ ಅನೇಕ ಮಂತ್ರಿ-ಶಾಸಕರನ್ನು ಕಾಣುತ್ತಿದ್ದೆವು! ಎಂಥಾ ದೌರ್ಭಾಗ್ಯ ನಮ್ಮದು ಅಲ್ಲವೆ....?

ನರಸಿಂಹರಾಜಪುರ ನಾಮಕಾವಾಸ್ತೆ ತಾಲ್ಲೂಕ್ ಕೇಂದ್ರವಾಗಿದ್ದರೂ, ಹೋಬಳಿ ಕೇಂದ್ರವಾದ ಬಾಳೆಹೊನ್ನೂರು ಉತ್ತಮ ಪ್ರಗತಿ ಸಾಧಿಸಿರುವುದು ಹೆಮ್ಮೆಯ ವಿಚಾರ. ಈ ಮಂಡಲ ಹೋಬಳಿ ಕೇಂದ್ರದ ಜೊತೆಗೆ ನಾಡ ಕಛೇರಿಯನ್ನೂ ಇತ್ತೀಚೆಗೆ ಹೊಂದಿದ್ದು ಈ ನಾಡ ಕಛೇರಿಯ ಉತ್ತಮ ಪ್ರಗತಿ ಕಾರ್ಯಗಳು ಹೋಬಳಿಯ ಮೂಲೆ-ಮೂಲೆಗೂ ತಲಪುವಂತೆ ಎಚ್ಚರ ವಹಿಸಿದರೆ ಮಂಡಲ ಪ್ರಧಾನ ಎನ್ನುವುದಕ್ಕಿಂತ ಹೋಬಳಿ ಪ್ರಧಾನರೆಂದೇ ಪ್ರಸಿದ್ಧರಾಗಬಹುದು.

ದ್ವೇಷಾಸೂಯೆಗಳನ್ನು ಮರೆತು ಉತ್ತಮ ಪ್ರಗತಿ ಸಾಧಿಸಲೆಂದೂ ಹಾಗೂ ಯುವಕತನದ ಸದುಪಯೋಗವಾಗಲೆಂದೂ ಈ ಪ್ರಧಾನರನ್ನು ಹಾರೈಸುತ್ತೇನೆ.

—ಎಂ. ಐ. ಶ್ರೀನಿವಾಸಮೂರ್ತಿ
ಮೂಡುಬಾಗಿಲು

# ಪರಿಸರ ಸಮತೋಲನಕ್ಕೆ ಅರಣ್ಯ ಅನಿವಾರ್ಯ

(3ನೇ ಪುಟದಿಂದ)

ಉದ್ಘಾಟನಾ ಭಾಷಣ ಮಾಡುತ್ತಾ ಗೋವಿಂದ ಗೌಡರು, ಅರಣ್ಯ ಸಂರಕ್ಷಿಸುವಲ್ಲಿ ಮತ್ತು ಬೆಳೆಸುವಲ್ಲಿ ಇಲಾಖೆಯೊಂದಿಗೆ ಪ್ರತಿಯೊಬ್ಬ ಪ್ರಜೆಯೂ ಹೊಣೆಗಾರಿಕೆ ಅರಿತು ಸಹಕರಿಸಬೇಕೆಂದು ಕರೆ ಇತ್ತರು. ಕಿಶನ್‌ಸಿಂಗ್ ಸುಗಾರ ಅವರು, ಕನ್ನಡ ಮಾತನಾಡಲು ಸರಿಯಾಗಿ ಬಾರದಿದ್ದರೂ ಪ್ರಯತ್ನ ಪೂರ್ವಕವಾಗಿ ಕನ್ನಡದಲ್ಲೇ ಮಾತನಾಡಿ, ಪರಿಸರ ಸಮತೋಲನದಲ್ಲಿ ಅರಣ್ಯದ ಪಾತ್ರದ ಬಗ್ಗೆ ವಿವರಿಸಿದರು.

ಮಂಡಲ ಪಂಚಾಯ್ತಿ ಸದಸ್ಯ ಹಾಗೂ ಸ್ಥಳೀಯ ಯುವಕ ಸಂಘದ ಅಧ್ಯಕ್ಷರಾದ ಜೆ. ಕೆ. ಶಿವಶಂಕರ್ ಗ್ರಾಮದ ಅವಶ್ಯಕತೆಗಳಾದ ರಸ್ತೆ, ವಿದ್ಯುಚ್ಛಕ್ತಿಯ ಅವ್ಯವಸ್ಥೆ, ಭೂ ರಹಿತ ಕೃಷಿ ಕಾರ್ಮಿಕರ ದರ್ಖಾಸ್ತು, ಶಾಲಾ ಉಪಾಧ್ಯಾಯರ ಕೊರತೆ-ಮುಂತಾದುವುಗಳ ಬಗ್ಗೆ ಮನವಿಯೊಂದನ್ನು ಸಲ್ಲಿಸಿದರು.

ಬಿ. ಎನ್. ಭಾಸ್ಕರ್ ಮಾತನಾಡಿ, ಯಾರೂ ಉದ್ದೇಶ ಪೂರ್ವಕವಾಗಿ ಸಮಸ್ಯೆಗಳನ್ನು ಸೃಷ್ಟಿ ಮಾಡದೆ, ಇರುವ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸಬೇಕೆಂದು ವಿನಂತಿಸಿದರು.

ಎ. ಎಲ್. ಪುಂಡರೀಕ ಸ್ವಾಗತಿಸಿ, ಬಿ ವಿ. ಶ್ರೀಧರ್ ರಾವ್ ಅತಿಥಿಗಳನ್ನು ಪರಿಚಯಿಸಿದರು. ಶಂಭು ಶಂಕರ ಶೆಟ್ಟಿ ವಂದಿಸಿದರು.

(ವರದಿ: ಬಿ. ಕೆ. ಲಕ್ಷ್ಮೀನಾರಾಯಣ)

## 'ನಿಷ್ಠೆಯಿಂದ ದುಡಿದು ಓಟಿನ ಋಣ ತೀರಿಸಿ'

ಬಿಳಾಲ್‌ಕೊಪ್ಪ: ರಾಮರಾಜ್ಯದ ಕನಸು ನನಸಾಗಲು ನಿಷ್ಠೆಯಿಂದ ಕೆಲಸಮಾಡಿ ಮತದಾರರು ನೀಡಿದ ಓಟಿನ ಋಣ ತೀರಿಸಿಕೊಳ್ಳುವಂತೆ ನೂತನವಾಗಿ ಕಾರ್ಯರೂಪಕ್ಕೆ ಬಂದ ಮಂಡಲ ಪಂಚಾಯಿತಿ ಪ್ರತಿನಿಧಿಗಳಿಗೆ ಶಾಸಕ ಗೋವಿಂದ ಗೌಡರು ಕರೆ ನೀಡಿದರು.

ಅವರು ಈಚೆಗೆ ಇಲ್ಲಿ ಅತ್ತಿಕುಡಿಗೆ ಮಂಡಲ ಪಂಚಾಯಿತಿಯನ್ನು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಮಂಡಲ ಪ್ರಧಾನ ಬಿ.ಎನ್. ಭಾಸ್ಕರ್ ಅಧ್ಯಕ್ಷತೆ ವಹಿಸಿದ್ದರು. (ವರದಿ: ಎಂ.ವಿ ಗಂಗಾಧರ್)

## ನ.ರಾ.ಪುರ: 16 ಸಾವಿರ ರೂ. ಬೆಲೆಯ ಗಂಧ ವಶ, ಇಬ್ಬರ ಸೆರೆ

ನ. ರಾ. ಪುರ: ಚಿಕ್ಕಗ್ರಹಾರ ವಲಯದ ಫಾರೆಸ್ಟರ್ ಶಾಂತಕುಮಾರ್ ಮತ್ತು ಸಿಬ್ಬಂದಿಯ್ಯವರು ಜು. 29 ರಂದು ಎಂಇಒ 804 ನಂಬರಿನ ಕಾರಿನಲ್ಲಿ ಸಾಗಿಸುತ್ತಿದ್ದ ಸುಮಾರು 16 ಸಾವಿರ ರೂ. ಬೆಲೆಯ 217 ಕಿಲೊ ಗಂಧವನ್ನು ಹಿಡಿದಿದ್ದಾರೆ. ಕಣತಿಯ ನೂರ್ ಮತ್ತು ಅಳೇಹಳ್ಳಿಯ ಕೃಷ್ಣ ಎಂಬಿಬ್ಬರು ಆರೋಪಿಗಳು ಸೆರೆ ಸಿಕ್ಕಿದ್ದು, ಕಾರನ್ನು ವಶ ಪಡಿಸಿಕೊಳ್ಳಲಾಗಿದೆ. ಅಳೇಹಳ್ಳಿ, ಕೂಸಗಲ್ ಕಡೆಯವರಾದ ನಾಗೇಶ, ಜನಾರ್ದನ, ಜಯರಾಂ, ಶ್ರೀನಿವಾಸ ಎಂಬ 4 ಆರೋಪಿಗಳು ತಲೆ ತಪ್ಪಿಸಿಕೊಂಡಿದ್ದಾರೆ. ಸೆರೆ ಸಿಕ್ಕವರನ್ನು ನ್ಯಾಯಾಂಗ ಬಂಧನಕ್ಕೊಳಪಡಿಸಲಾಗಿದೆ.

ವಲಯ ಅರಣ್ಯಾಧಿಕಾರಿ ಕೆ. ಎನ್. ಲಕ್ಷ್ಮೀನಾರಾಯಣ್ ಮುಂದಿನ ತನಿಖೆ ನಡೆಸಿದ್ದಾರೆ.

## ಮಕ್ಕಳಿಗೆ ಮರ ಗಿಡಗಳ ಬಗ್ಗೆ ಪ್ರೀತಿ ಹುಟ್ಟಿಸಿ

(3ನೇ ಪುಟದಿಂದ)

ನಮ್ಮ ಮುಂದೆ ಕುಳಿತ ಈ ಮಕ್ಕಳಿಗೆ ನಾವು ಏನು ಉಳಿಸಿ ಹೋಗುತ್ತೇವೆಯೋ ಎಂದ ಅವರು, ನೆಮ್ಮಾರು ಹಂದಿ ಸಾಕಣೆ ಕೇಂದ್ರದ ಫಲಾನುಭವಿಗಳಿಗೆ ಅನ್ಯಾಯ ಮಾಡಿ, ಅದರ ಮೇಲೆ ಅವರಿಂದ ದಾಖಲೆಗಳಿಗೆ ಮೋಸದಲ್ಲಿ ಅಧಿಕಾರಿಗಳು ಸಹಿ ಪಡೆದ ಬಗ್ಗೆ ಬಹಳ ಉದ್ವೇಗದಿಂದ ಮಾತನಾಡಿ, ಹರಿಜನರಿಗೆ, ದುರ್ಬಲರಿಗೆ ಈ ಸಮಾಜ ವ್ಯವಸ್ಥಿತವಾಗಿ ಮೋಸ ಮಾಡುತ್ತಾ ಬಂದಿದೆ. ಆದರೆ ಇದಕ್ಕೆ ಕೊನೆಯಿಲ್ಲ ಎಂದು ತಿಳಿಯಬೇಡಿ ಎಂದು ಎಚ್ಚರಿಸಿದರು. ಈ ಯೋಜನೆಯ ವಿಫಲತೆಗೆ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳೇ ಕಾರಣ ಎಂದರು.

(ವರದಿ: ಕಲ್ಮಕ್ಕಿ ವಿಠಲ ಹೆಗ್ಡೆ)

## ಕಾನ್ವೆಂಟ್ ಮಕ್ಕಳ ಹೆಮ್ಮೆಯ ಮೆರವಣಿಗೆ

ಕೊಪ್ಪ: ಇಲ್ಲಿನ ಕಾನ್ವೆಂಟ್ ಶಾಲೆಯಲ್ಲಿ ಈ ಬಾರಿಯ ಎಸ್ಸೆಸ್ಸೆಲ್ಸಿ ಪರೀಕ್ಷೆಯಲ್ಲಿ 67 ವಿದ್ಯಾರ್ಥಿ, ವಿದ್ಯಾರ್ಥಿನಿಯರ ಪೈಕಿ ಎಲ್ಲರೂ ಪಾಸಾಗಿ ಶೇ. 100ರ ಫಲಿತಾಂಶ ಪಡೆದ ಜಿಲ್ಲೆಯ ಏಕೈಕ ಶಾಲೆಯಾದುದಲ್ಲದೆ, ಗರಿಷ್ಠ ಫಲಿತಾಂಶಕ್ಕಾಗಿ ಎಲ್ಲಾ 6 ವಿಷಯಗಳಲ್ಲಿನ ಬಹುಮಾನಗಳನ್ನೂ, ಸಮಗ್ರ ಪಾರಿತೋಷಕವನ್ನೂ ಪಡೆದ ಸಂದರ್ಭದಲ್ಲಿ ಶಾಲಾ ಮಕ್ಕಳು ಜು. 29 ರಂದು ಊರಿನಲ್ಲಿ ಸಂಭ್ರಮದ ಮೆರವಣಿಗೆ ನಡೆಸಿದರು.







ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀಪಟಿಗೆ ಅಚ್ಚುಕೂಟ, ಕೊಪ್ಪ

# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

5ನೇ ವರ್ಷ 45ನೇ ಸಂಚಿಕೆ ಕೊಪ್ಪ 2-8-1987 ಭಾನುವಾರ ಬೆಲೆ 50 ಪೈಸೆ


## 3 ಬೇಡಿಕೆ ಇತ್ಯರ್ಥ, 150ರೂ. ತಾತ್ಕಾಲಿಕ ಪರಿಹಾರ;

## ಉಳಿದೆಲ್ಲ ಬೇಡಿಕೆಗಳ ಚರ್ಚೆಗೆ ಮಾಲೀಕರ ಒಪ್ಪಿಗೆ :

# ಶಂಕರ್ ಕಾರ್ಮಿಕರ ಮುಷ್ಕರ ನಿಲುಗಡೆ

**ಕೊಪ್ಪ : ತಾತ್ಕಾಲಿಕ ಪರಿಹಾರ ನೀಡಿಕೆ ಹಾಗೂ ಬೇಡಿಕೆ ಪತ್ರದಲ್ಲಿನ ಎಲ್ಲ ಬೇಡಿಕೆಗಳ ಬಗ್ಗೆ ಮಾತುಕತೆ ನಡೆಸಲು ಮಾಲೀಕ ವರ್ಗ ಒಪ್ಪಿರುವ ನೆಲೆಯಲ್ಲಿ, ಇಲ್ಲಿನ ಶಂಕರ್ ಸಾರಿಗೆ ಸಂಸ್ಥೆ ನೌಕರರ ಮುಷ್ಕರ ಕೊನೆಗೊಂಡು, ಜು. 28ರಿಂದ ಬಸ್‌ಗಳ ಓಡಾಟ ಪುನರಾರಂಭವಾಗಿದೆ.**

ಗ್ಯಾರೇಜ್ ಮತ್ತು ರನ್ನಿಂಗ್ ಸಿಬ್ಬಂದಿಗಳಿಗೆ ವರ್ಷಕ್ಕೆ 6 ದಿನ ಕ್ಯಾಶ್ಯುವಲ್ ರಜೆ, ತಿಂಗಳಿಗೆ 450 ರೂ. ವರೆಗಿನ ಸಂಬಳದವರಿಗೆ 20 ರೂ ಹಾಗೂ ಅದಕ್ಕಿಂತ ಹೆಚ್ಚಿನವರಿಗೆ 30 ರೂ. ಮನೆ ಬಾಡಿಗೆ ಭತ್ಯೆ ಹಾಗೂ ವರ್ಷಕ್ಕೆ ಒಂದು ಜೊತೆ ಲಿಡ್ಕರ್ ತಯಾರಿಕೆಯ 'ಪಠಾಣ್' ಚಪ್ಪಲಿಗಳು—ಇವಿಷ್ಟನ್ನು ನೀಡಲು ಮಾಲೀಕ ವರ್ಗ ಒಪ್ಪಿದೆ. ಕಚೇರಿ ಸಿಬ್ಬಂದಿಗಳ ಹೊರತು ಬೇರಾರಿಗೂ ಈ ಸೌಲಭ್ಯಗಳು (ಚಪ್ಪಲಿ ಹೊರತುಪಡಿಸಿ) ಈವರೆಗೆ ಇರಲಿಲ್ಲ

(ಜು. 9ರಂದು ನಡೆದು ವಿಫಲವಾದ ಸಂಧಾನದ ವೇಳೆ ಈ ಮೂರು ಬೇಡಿಕೆಗಳಿಗೆ ಮಾಲೀಕರು ಒಪ್ಪಿದ್ದರಾದರೂ ಮನೆ ಬಾಡಿಗೆ ಭತ್ಯೆ 15 ರೂ. ಮತ್ತು 20 ರೂ, ಕ್ಯಾ. ರಜೆ 5 ದಿನ ಕೊಡಲೊಪ್ಪಿದ್ದು, ಚಪ್ಪಲಿ ಲಿಡ್ಕರ್ ಎಂದು ನಿಗದಿ ಮಾಡಿರಲಿಲ್ಲ )

ಪ್ರಮುಖ ಬೇಡಿಕೆಯಾದ ವೇತನ ಹೆಚ್ಚಳದ ಬಗ್ಗೆ ಸಮರ್ಪಕವಾದ ಒಡಂಬಡಿಕೆ ಮೂಡದುದರಿಂದ ಅದರ ಬಗ್ಗೆ ಹಾಗೂ ಉಳಿದೆಲ್ಲ ಬೇಡಿಕೆಗಳ ಬಗ್ಗೆ ಅತಿ ಶೀಘ್ರದಲ್ಲೇ ಎರಡೂ ಕಡೆಯವರು ಪುನಃ ಸಭೆ ಸೇರಿ ಚರ್ಚಿಸುವುದೆಂದೂ, ಆ ಬಾಬ್ತು ತಾತ್ಕಾಲಿಕ ಪರಿಹಾರವಾಗಿ 150 ರೂ. ಗಳನ್ನು ಸಂಸ್ಥೆ ಎಲ್ಲಾ ಕಾರ್ಮಿಕರಿಗೂ ನೀಡುವುದೆಂದೂ ಒಪ್ಪಂದವಾಗಿ, ಮುಂದಿನ ಮಾತುಕತೆಗಳಿಗೆ ಸೌಹಾರ್ದದ ವಾತಾವರಣ ಕಲ್ಪಿಸುವ ದೃಷ್ಟಿಯಿಂದ ಕಾರ್ಮಿಕರು ಮುಷ್ಕರ ನಿಲ್ಲಿಸಲು ಒಪ್ಪಿಕೊಂಡರು.

ವೇತನ ಪುನರ್ವಿಮರ್ಶೆಯಾದ ನಂತರ ಕಾರ್ಮಿಕರಿಗೆ ದೊರೆಯುವ ವೇತನದ ಬಾಕಿಯಲ್ಲಿ (arrears) ಈ 150 ರೂ.ಗಳನ್ನು ಮುಂಗಡ ಹಣದಂತೆ ಮುರಿದುಕೊಳ್ಳಲಾಗುವುದು. (ಕೆಲವರು ಬಹುಶಃ ತಿಳಿದುಕೊಂಡಿರುವಂತೆ ಸಂಬಳದಿಂದ ಮುರಿದುಕೊಳ್ಳುವುದಲ್ಲ ಸಂಬಳ ಏರಿಕೆಯಾದ ಮೇಲೆಯೇ.) ಸಂಬಳ ಏರಿಕೆಯ ಬಗ್ಗೆ ಕೂಡ ಮಾಲೀಕರು ಕೊಡಲೊಪ್ಪಿದ ಮೊತ್ತ ಕಾರ್ಮಿಕರಿಗೆ ತೃಪ್ತಿಕರವಾಗದ್ದರಿಂದ ಆ ಬೇಡಿಕೆಯ ಚರ್ಚೆ ಮುಂದೂಡಲಾಗಿದೆ.

'ಇದಲ್ಲದೆ ಮುಷ್ಕರದ ಸಂಘಟನೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದವರ ಮೇಲೆ ಬಸ್ ಚಕ್ರದ ಗಾಳಿ ಬಿಟ್ಟದ್ದು, ಕಲ್ಲು ಹೊಡೆದದ್ದು — ಮುಂತಾದ ಆಪಾದನೆಗಳನ್ನು ಹೊರಿಸಿ, ಸೇವೆಯಿಂದ ತೆಗೆದು ಹಾಕುವ ಬಗ್ಗೆ ಚಾರ್ಜ್‌ಶೀಟ್‌ಗಳನ್ನು ಕಂಪೆನಿ ಸಿದ್ಧಪಡಿಸಿದ್ದು. ಈ ವಿಚಾರದಲ್ಲಿ ಎರಡೂ ಪಕ್ಷಗಳೂ ಚರ್ಚಿಸಿ ಇತ್ಯರ್ಥಗೊಳಿಸಬೇಕೆಂದೂ, ಇತ್ಯರ್ಥವಾಗದಿದ್ದಲ್ಲಿ ಎ ಎಲ್ ಸಿ ಯವರ ತೀರ್ಮಾನಕ್ಕೆ ಬಿಡಬೇಕೆಂದೂ ಒಪ್ಪಲಾಗಿದೆ.

ಹೆಚ್ಚಿನ ಮಾತುಕತೆಗಳು ಇಷ್ಟರಲ್ಲೇ ಆರಂಭವಾಗುವುವೆಂದಿರುವ ಸಂಘದ ಪ್ರಧಾನ ಕಾರ್ಯದರ್ಶಿ ಎಚ್. ಎಂ. ರೇಣುಕಾರಾಧ್ಯ, ಮುಷ್ಕರದ ವೇಳೆ ಸಹಾನುಭೂತಿ ತೋರಿದ, ಸಹಕರಿಸಿದ ಎಲ್ಲರಿಗೂ ಕಾರ್ಮಿಕರ ಪರವಾಗಿ ಕೃತಜ್ಞತೆ ಸಲ್ಲಿಸಿದ್ದಾರೆ.

## ಶಂಕರ್ ಸಂಸ್ಥೆಯ ಕಾರ್ಮಿಕ ಮುಂದಾಳು ಚಿಕ್ಕೇಗೌಡರ ಮೇಲೆ ಮಾರಕ ಹಲ್ಲೆ

**ಕೊಪ್ಪ : ಈ ವರದಿಗಳು ಅಚ್ಚಿಗೆ ಹೋಗುತ್ತಿರುವಂತೆ, ನಿನ್ನೆ (ಶನಿವಾರ) ರಾತ್ರಿ ಶಂಕರ್ ಕಂಪೆನಿಯ ಮೆಕ್ಯಾನಿಕ್ ಚಿಕ್ಕೇಗೌಡರ ಮೇಲೆ ಇಬ್ಬರು ದುಷ್ಕರ್ಮಿಗಳು ಮಾರಕವಾಗಿ ಹಲ್ಲೆ ನಡೆಸಿರುವುದು ಗೊತ್ತಾಗಿದೆ.**

ಶಂಕರ್ ಕಂಪೆನಿಯ ಮಾಲೀಕರು ಚಿಕ್ಕೇಗೌಡ, ಸಂಜೀವ, ಬಿ. ಟಿ. ಚಂದ್ರ, ಬೆಳ್ಳೂರ್, ಬಾಳೆಹೊನ್ನೂರಿನ ಶಂಕರನಾರಾಯಣ ಭಟ್ ಮುಂತಾದವರ ಹಿಂದೆ 'ಜನ'ಗಳನ್ನು ಬಿಟ್ಟಿದ್ದಾರೆಂಬ ವರ್ತಮಾನ ರಾತ್ರಿ 9 ಗಂಟೆಯ ಹೊತ್ತಿಗೆ ಬಂದಿದ್ದರೂ, ಅದನ್ನು ಅಷ್ಟಾಗಿ ತಲೆಗೆ ಹಚ್ಚಿಕೊಳ್ಳದೆ ಚಿಕ್ಕೇಗೌಡ ಎರಡನೇ ಶೋ ಸಿನಿಮಾಕ್ಕೆ ಹೋಗಿದ್ದರು.

ರಾತ್ರಿ ಸುಮಾರು 12 ಗಂಟೆಯ ಹೊತ್ತಿಗೆ ಸಿನಿಮಾ ಮುಗಿಸಿ, ಟಾಕೀಸಿನ ಹಿಂಭಾಗದ ರಸ್ತೆಯಲ್ಲಿದ್ದ ತಮ್ಮ ರೂಮಿಗೆ ಹೋಗುವಾಗ ನಿರ್ಜನ ರಸ್ತೆಯಲ್ಲಿ ಹಿಂಬಾಲಿಸಿ ಬಂದ ಇಬ್ಬರು ಗಂಟೆ ಕೇಳಿ, ಬೆಂಕಿ ಪೆಟ್ಟಿಗೆ ಕೇಳಿ, ಅನಂತರ 'ನೀವು ಕಂಪೆನಿಯಲ್ಲಿರುವುದಾ?' ಎಂದು ವಿಚಾರಿಸಿ, ಹೌದೆಂದಾಗ, "ಏನೋ, ಕಂಪೆನಿಯಲ್ಲಿ ನೀನೇನು ದೊಡ್ಡ ದಾದನಾ? ಇನ್ನು ಎರಡು ದಿನದಲ್ಲಿ ಕಂಪೆನಿ ಬಿಟ್ಟು ಹೋಗದಿದ್ದರೆ ನಿನ್ನನ್ನು ಕೊಂದುಹಾಕ್ತೀವೆ" ಎನ್ನುತ್ತಾ ಹಿಂದಿನಿಂದ ತಲೆಗೆ ಬಲವಾಗಿ ಹೊಡೆದರು.

ಇದರಿಂದ ತಲೆ ತಿರುಗಿ ಬಿದ್ದ ತನಗೆ ಪುನಃ ಎದೆ, ಹೊಟ್ಟೆ, ಮುಂತಾಗಿ ಒದ್ದು, ಹೊಡೆದು ತೀವ್ರ ರೀತಿಯಲ್ಲಿ ಹಲ್ಲೆ ನಡೆಸಿದರು. ಇದರಿಂದಾಗಿ ಪ್ರಜ್ಞೆ ತಪ್ಪಿ ಬಿದ್ದೆ ಎಂದು ಚಿಕ್ಕೇಗೌಡ ಹೇಳಿದ್ದಾರೆ.

ಸುಮಾರು ರಾತ್ರಿ 2 ಗಂಟೆಯ ಹೊತ್ತಿಗೆ ಮರಳು ರಾಶಿಯಲ್ಲಿ ಎಚ್ಚರವಿಲ್ಲದೆ ಬಿದ್ದಿದ್ದ ಅವರನ್ನು ಗೂರ್ಖ ನೋಡಿ, ಎಬ್ಬಿಸಿ ಠಾಣೆಗೆ ಕರೆತಂದು ಬಿಟ್ಟರೆನ್ನಲಾಗಿದೆ. ಬೆಳಗಿನ ತನಕ ಅಲ್ಲಿ ಮಲಗಿದ್ದ ಅವರನ್ನು ನಂತರ ಆಸ್ಪತ್ರೆಗೆ ಕರೆದೊಯ್ದು, ಪರೀಕ್ಷಿಸಿ ಚಿಕಿತ್ಸೆ ನೀಡಲಾಯಿತು. ತೀವ್ರವಾದ ಪೆಟ್ಟೇನೂ ಆಗದೆ ಪಾರಾಗಿದ್ದಾರೆಂದು ಹೇಳಲಾಗಿದೆ. ಹಲ್ಲೆ ನಡೆದ ವೇಳೆ ಬಹುಶಃ ಯಾರಾದರೂ ಆ ದಾರಿಯಲ್ಲಿ ಬಂದುದರಿಂದ ಅಷ್ಟಕ್ಕೇ ಬಿಟ್ಟು ಹೋಗಿರಬಹುದೆಂದು ಊಹಿಸಲಾಗಿದೆ.

ಪೋಲೀಸರಿಗೆ ದೂರು ನೀಡಲಾಗಿದ್ದು, ತನಿಖೆ ನಡೆಯುತ್ತಿದೆ.

## ಅನಾವೃಷ್ಟಿ : ಬೆಳೆ ಬದಲಿಗೆ ಸಲಹೆ

ಕೊಪ್ಪ, ನರಸಿಂಹರಾಜಪುರ ಮತ್ತು ಶೃಂಗೇರಿ ತಾಲ್ಲೂಕುಗಳಲ್ಲಿ ಜುಲೈ ತಿಂಗಳ ಮೊದಲ ವಾರದಿಂದಲೂ ಮಳೆ ಬಾರದ್ದರಿಂದ ಕೇವಲ ತಗ್ಗಿನ ಗದ್ದೆಗಳಲ್ಲಿ ಮಾತ್ರ ಭತ್ತದ ಬೆಳೆಯ ನಾಟಿಯಾಗಿದ್ದು, ಮುಂದೆ ಸಹ ಮಳೆ ಬಾರದಿದ್ದರೆ ನಾಟಿಯಾಗಿರುವ ಬೆಳೆಗೂ ನೀರಿನ ಕೊರತೆ ಉಂಟಾಗುವುದಲ್ಲದೆ ಮೇಲಿನ ಹಾಗೂ ನಡುವಿನ ಗದ್ದೆಗಳಲ್ಲಿ ಭತ್ತದ ಬೆಳೆ ತೆಗೆದುಕೊಳ್ಳುವುದು ಅಸಾಧ್ಯವಾಗುತ್ತದೆ.

ಇಂತಹ ಪರಿಸ್ಥಿತಿಯಲ್ಲಿ ರೈತ ಬಾಂಧವರು ಬೆಳೆ ಬದಲಾವಣೆ ಮಾಡಿ. ಅಲ್ಪ ತೇವಾಂಶದಿಂದ ಬೆಳೆಯಬಹುದಾದ ಖುಷ್ಕಿ ಬೆಳೆಗಳಾದ ರಾಗಿ, ಮುಸುಕಿನ ಜೋಳ, ಅಲಸಂದೆ, ಹೆಸರು, ಹುರುಳಿ, ಎಳ್ಳು, ಸೂರ್ಯಕಾಂತಿ—ಈ ಬೆಳೆಗಳನ್ನು ಯಶಸ್ವಿಯಾಗಿ ಬೆಳೆದುಕೊಳ್ಳಬಹುದು. ಈ ಬೆಳೆಗಳಿಗೆ ಈಗಿರುವ ತೇವಾಂಶದ ಜೊತೆಗೆ 2-3 ಸಾಧಾರಣ ಮಳೆ ಬಂದರೆ ಸಾಕಾಗುತ್ತದೆ. ರೈತರು ಈ ಬೆಳೆಗಳ ಬಗ್ಗೆ ತಾಂತ್ರಿಕ ಸಲಹೆಗಳಿಗಾಗಿ ಹಾಗೂ ಈ ಬೆಳೆಗಳ ಬೀಜದ ಪೂರೈಕೆಗಾಗಿ ಹತ್ತಿರದ ಕೃಷಿ ಸಹಾಯಕರನ್ನಾಗಲಿ ಅಥವಾ ತಾಲ್ಲೂಕಿನ ಸಹಾಯಕ ಕೃಷಿ ನಿರ್ದೇಶಕರನ್ನಾಗಲಿ ಸಂಪರ್ಕಿಸಬೇಕೆಂದು ಕೋರಲಾಗಿದೆ.

## ಮಲೆನಾಡಿನಲ್ಲಿ ಬರದ ಮುನ್ಸೂಚನೆ

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ: ಪ್ರಕೃತಿಯ ಅಪ ಬಳಕೆ ಅಥವಾ ಅರಣ್ಯದ ಮೇಲಿನ ನಿರಂತರ ಅತ್ಯಾಚಾರದ ಪ್ರತೀಕಾರವಾಗಿಯೋ ಎಂಬಂತೆ, ಕಳೆದ ಕೆಲವು ವರ್ಷಗಳಿಂದ ಗಣನೀಯವಾಗಿ ಕಡಿಮೆಯಾಗುತ್ತಾ ಬಂದಿರುವ ಮಳೆ ಈ ಬಾರಿ ಪೂರ್ತಿ ಕೈ ಕೊಟ್ಟಿದೆ.

1977ಕ್ಕಿಂತ ಹಿಂದೆ ಈ ತಾಲ್ಲೂಕಿನಲ್ಲಿ ಮಳೆಯ ಸರಾಸರಿ 200 ಅಂಗುಲ ಇದ್ದು, ನಿತ್ಯ ಹಸಿರಿನ ಮಲೆನಾಡು ಅರಣ್ಯವ[...] ಕಳೆದುಕೊಂಡು ಬೆತ್ತಲಾಗುತ್ತಾ ಬಂ[...]ತೆಲ್ಲ ನರ್ಸ ವರ್ಷಕ್ಕೂ ಕ್ಷೀಣಿಸುತ್ತಿದೆ.

ಈ ವರ್ಷ ಜುಲೈ ಕೊನೆಯವರೆಗೆ [...]ರುವ ಮಳೆಯ ಪ್ರಮಾಣ ಕಳೆದ ವ[...] ಈ ಅವಧಿಯಲ್ಲಿ ಆಗಿದ್ದರ ಅರ್ಧದಷ್ಟು [...]ತ್ರ ಆಗಿದೆ. ಅದರಲ್ಲೂ ಭತ್ತದ ಬೇಸಾ[...] ತೀವ್ರಗತಿಯಲ್ಲಿ ಸಾಗಬೇಕಾಗಿದ್ದ ಜು[...] ತಿಂಗಳಲ್ಲಿ ಸರಾಸರಿ 3 ರಿಂದ 5 ಅಂ[...]ದೊಳಗೆ ಮಾತ್ರ ಆಗಿದೆ.

ಮಳೆಯಾದರೂ ಮುಂದಿನ ದಿನಗ[...] ಬೀಳುವ ನಿರೀಕ್ಷೆ ಇಟ್ಟುಕೊಂಡಿರುವ [...]ತರು, ಜಲದ ಕಣ್ಣು ಇನ್ನೂ ಒಡೆಯದ[...]ವ ಬಗ್ಗೆ ಕಂಗಾಲಾಗಿದ್ದಾರೆ. ಜೂನ್–ಜು[...]ನಲ್ಲಿ ಅತಿ ಅಬ್ಬರದಿಂದ ಮಳೆ ಗಾಳಿಗೆ [...] ಒಡೆಯುತ್ತಿದ್ದು, ಅನಂತರ ಮಳೆ ಕಡಿ[...]ಯಾದರೂ ನೀರು ಕಡಿಮೆಯಾಗದೆ, [...] 90ರಷ್ಟು ತರಿ ಜಮೀನು ಸಾಗುವಳಿಯಾ[...]ತ್ತಿತ್ತು. ಈ ಬಾರಿ ತಗ್ಗಿನ ಕೆಲವು ಗದ್ದೆಗ[...] ನಾಟಿಯಾಗಿದ್ದು, ಬಿಟ್ಟರೆ ನೀರಾವರಿ ಎನ್ನಿ[...] ಕೊಳ್ಳುವ ಗದ್ದೆಗಳೂ ಸಹ ಆಕಾಶ ನೋ[...]ವಂತಾಗಿದೆ. ಸಸಿಗೆ ದಿನವಾಗಿ ಗಣ್ಣು ಬ[...]ದ್ದರೂ ನಾಟಿ ಮಾಡಲಾಗದೆ ಸಸಿ ಹಾ[...]ಗುತ್ತಿದೆ. ಇಲ್ಲೇ ಹೀಗಾದರೆ ಇನ್ನು ಬಯ[...] ಸೀಮೆಯ ಪಾಡೇನು ಎಂಬ ಆತಂ[...] ಜೊತೆಗೆ ಮಲೆನಾಡಿನಲ್ಲಿ ಕೂಡ, ಮುಂದಿ[...] ವರ್ಷ ಬಡವರು ತಿನ್ನುವುದೇನು? ಎಂ[...] ಭಯ ಎಲ್ಲೆಡೆ ಆವರಿಸಿದೆ.

ಕೊಪ್ಪ, ನ. ರಾ. ಪುರ, ತೀರ್ಥಹಳ್ಳಿ[...] ಮೂಡಿಗೆರೆ ಮುಂತಾಗಿ, ಮಲೆನಾಡಿನ ಇ[...]ರ ತಾಲ್ಲೂಕುಗಳ ಪರಿಸ್ಥಿತಿ ಕೂಡ ಇಷ್ಟೆ[...] ಅಥವಾ ಇದಕ್ಕಿಂತಲೂ ಶೋಚನೀಯ[...]ವಾಗಿದೆ. ಬಹುಶಃ ಇತಿಹಾಸದಲ್ಲೇ ಮೊದ[...] ಬಾರಿಗೆ ಈ ತಾಲ್ಲೂಕುಗಳನ್ನೂ ಸಹ "ಬ[...] ಪೀಡಿತ ಪ್ರದೇಶ"ವೆಂದು ಘೋಷಿಸಬೇಕೆಂ[...] ನಿರ್ಣಯಗಳನ್ನು ಮಂಡಲ ಪಂಚಾಯಿ[...]ಗಳು ಕೈಗೊಳ್ಳುತ್ತಿವೆ.

ನ.ರಾ. ಪುರ ತಾಲ್ಲೂಕಿನ ಮಂಡಲ ಪ್ರಧಾನರು – 7 ಬಿ. ಕಣಬೂರು (ಬಾಳೆಹೊನ್ನೂರು ಮಂಡಲ)

# ಜನತಾಕ್ಕೆ ಕಗ್ಗಂಟಾದ ಕಗ್ಗನಗದ್ದೆ ವೆಂಕಟೇಶ್

ಕಗ್ಗನಗದ್ದೆಯ ಚಂದ್ರಯ್ಯ ಗೌಡರ ಮಗ ಕೆ. ಸಿ. ವೆಂಕಟೇಶ್ ವಿದ್ಯಾವಂತ ಯುವಕ. ಜನತಾ ಪಕ್ಷದಿಂದ ಮಂಡಲ ಸದಸ್ಯರಾಗಿ ಆಯ್ಕೆಗೊಂಡು ಈ ಮಂಡಲ ದ ಪ್ರಧಾನರ ಆಯ್ಕೆಯಲ್ಲಿ 'ಬಂಡಾಯ ಅಭ್ಯರ್ಥಿ' ಎಂಬ ಅಡ್ಡನಾಮವನ್ನು ಪತ್ರಿಕೆ ಗಳಲ್ಲಿ ಪಡೆದು ಪ್ರಧಾನರಾದ ಇವರಿಗೆ, ಬಂಡಾಯದಿಂದಲಾದರೂ ಪಡೆದ ಈ ಪದ ವಿಯ ಯಶಸ್ವಿ ನಿರ್ವಹಣೆಯಲ್ಲಿ ಶುಭಕೋರು ತ್ತಾ........

(ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯ ಬಿಲ್ ಹಿಂಭಾಗದಲ್ಲಿ ಸೂಚನೆಯೊಂದಿತ್ತು: 'ತಪ್ಪು–ಒಪ್ಪುಗಳಿಂದ ಹೊರತು ಪಡಿಸಿ" ಎಂದು. ತಪ್ಪುಗಳಿಂದ ಹೊರತುಪಡಿಸುವು ದು ಸರಿ; ಒಪ್ಪುಗಳಿಂದಲೂ ಹೊರತು ಪಡಿ ಸಿ ಎಂದರೆ? ಅರ್ಥಾತ್ ಈ ಬಿಲ್ ಸರಿಯಿ ಲ್ಲ ಎಂದು. ಆದರೆ ಈ ಲೇಖನದ ಅಣಕ ವನ್ನು ತಪ್ಪಿನಿಂದ ಮಾತ್ರ ಹೊರತು ಪಡಿ ಸಿ. ಏಕೆಂದರೆ ಈ ತಾಲ್ಲೂಕಿನ ಅನೇಕ ಪ್ರ ಧಾನರು ನರಸಿಂಹರಾಜಪುರದಲ್ಲಿ ಭೇಟಿ ಯಾಗಿದ್ದರು. ಇನ್ನುಳಿದವರಿಗೆ ಪ್ರಧಾನರ ಪರಿಚಯದ ಲೇಖನಕ್ಕಾಗಿ ವಿವರಗಳನ್ನು ಕೋರಿ ಪತ್ರ ಬರೆದಿದ್ದೆ. ಅಂತೆಯೇ ಈ ಪ್ರ ಧಾನರಿಗೂ ಬರೆದಿದ್ದೆ ಹಾಗೂ ಬಾಳೆಹೊ ನ್ನೂರಿನ ಮಂಡಲ ಕಛೇರಿಗೂ ಭೇಟಿ ನೀಡಿ ದ್ದೆ. ಅಲ್ಲಿಯೂ ಇವರ ಭೇಟಿಯಾಗಲಿಲ್ಲ ಹಾಗೂ ಇವರಿಂದ ಯಾವ ಉತ್ತರವೂ ಬರ ಲಿಲ್ಲ. ಹಾಗಾಗಿ "ತಪ್ಪುಗಳಿಂದ ಹೊರತು ಪಡಿಸಿ" ಎಂದದ್ದು.)

ಮಂಡಲದ ಸದಸ್ಯ ಚುನಾವಣೆಯಲ್ಲಿ ಜನತಾದಿಂದ ಸ್ಪರ್ಧಿಸಿ ಕಾಂಗ್ರೆಸ್‌ನ ಹಳೇ ಹುಲಿ ಕೆ.ಟಿ. ಚಿನ್ನಯ್ಯ ಗೌಡರನ್ನು ಸೋ ಲಿಸಿದ್ದು ಒಂದು ಬಹುದೊಡ್ಡ ಸಾಧನೆ ಎಂ ಬಂತೆ ಜನತಾದ ಕೆಲ ಪುಡಿಯಾಳುಗಳು ಈ ವೆಂಕಟೇಶರ ಹೆಸರನ್ನು ಪ್ರಧಾನ ಪಟ್ಟ ಕ್ಕೂ ಎತ್ತಿ ಹಿಡಿದ "ಒಂದು ಹಠ" ಚುನಾ ವಣೆಯಲ್ಲಿ ಚಲಾವಣೆಯಾಯಿತು.

ಪ್ರಧಾನರ ಚುನಾವಣೆಗೆ ಮುಂಚೆ ಈ ಮಂಡಲದ ಜನತಾದ ಹಿರಿಯ ಸದಸ್ಯ ಕೃಷ್ಣಸ್ವಾಮಿಯವರನ್ನು ಪ್ರಧಾನ ಪಟ್ಟಕ್ಕೆ ಜನತಾ ಅಭ್ಯರ್ಥಿಯಾಗಿ ಆಯ್ಕೆ ಮಾಡ ಲಾಗಿದ್ದು ಒಂದು ದಿನ ಉರುಳುವುದರೊಳ ಗಾಗಿ ಕೃಷ್ಣಸ್ವಾಮಿಯವರನ್ನೇ ಉರುಳಿಸಿ, ವೆಂಕಟೇಶರನ್ನು ಬಂಡಾಯವೆಬ್ಬಿಸಿ ಹಿಂಭಾ ಗದಿಂದ ಬೆಂಬಲಿಸಿದ ಕೀರ್ತಿ ತಾಲ್ಲೂಕ್ ಜನತಾಧ್ಯಕ್ಷರಿಗೆ ಮತ್ತು ಈ ಮಂಡಲದ ಜನತಾ ಘಟಕದ ಕೆಲ ಮುಂದಾಳುಗಳಿಗೆ ಸಲ್ಲುತ್ತದೆಂದು ಜನರಾಡಿಕೊಳ್ಳುತ್ತಿದ್ದಾರೆ. ಈ ಪ್ರಧಾನರ ಚುನಾವಣೆಯಲ್ಲಿ ಕಾಂಗ್ರೆ ಸೂಡ "ಹಾವು ಸಾಯಬಾರದು–ಕೋಲು ಮುರಿಯಬಾರದು" ಎನ್ನುವಂತೆ ವೆಂಕಟೇ ಶ್ ಮತ್ತು ಕೃಷ್ಣಸ್ವಾಮಿಯವರಿಗೆ ತಲಾ ಎರಡೆರಡು ಮತ ನೀಡಿತು. ಅರ್ಥಾತ್ ಕೃಷ್ಣಸ್ವಾಮಿಯವರು ಬೇಕು. ಆದರೆ ಸೋ ತಿರಬೇಕು!?

ಈ ಮಂಡಲದ ಕೇಂದ್ರ ಸ್ಥಳ ಬಾಳೆ ಹೊನ್ನೂರಿನಲ್ಲಿ ಪ್ರಮುಖ ಸಮಸ್ಯೆಗಳು ವಿದ್ಯುತ್ (ಮುವತ್ತು ದಿನಗಳಲ್ಲಿ ಇಪ್ಪತ್ತೈ ದು ದಿನಗಳು ಮಾತ್ರ ಇರಬೇಕು. ಏಕೆಂದ ರೆ ವಿದ್ಯುತ್ ದರ ಜಾಸ್ತಿ ಆದ್ದರಿಂದ ಜನಕ್ಕೆ ಹೊರೆಯಾಗಬಾರದು); ಬೀದಿಗಳ ನೈರ್ಮ ಲ್ಯ (ಆರೋಗ್ಯ ಹೆಚ್ಚಿಗೆ ಕಾಪಾಡಿಕೊಳ್ಳ ಬಾರದು, ವೈದ್ಯರ ಸಂಖ್ಯೆ ಜಾಸ್ತಿಯಾಗಿ ದೆ); ನೀರು (ಭದ್ರಾನದಿ ಪಕ್ಕದಲ್ಲಿದೆ, ಸ್ವ ಲ್ಪ ದೂರ ನಡೆದು ತಂದರೆ ವ್ಯಾಯಾಮ ವಾಗುತ್ತದೆ); ಬಸ್ ನಿಲ್ದಾಣದ ಮೂತ್ರಿ ಗಳು ನಾರುವಿಕೆ (ರಾಜಕೀಯ ಪಕ್ಷಗಳು, ವ್ಯಕ್ತಿಗಳೇ ಈ ಪಾಟಿ ನಾರುತ್ತಿರುವಾಗ ಮೂತ್ರಿಗಳು ತಮ್ಮ ಹುಟ್ಟು ಗುಣ ಬಿಟ್ಟು ಕೊಟ್ಟಾವೆ?)– ಹೀಗೆ ಹಲವು ಹತ್ತು ಸ ಮಸ್ಯೆಗಳು ಹಲವು ಹತ್ತು ಇಲಾಖೆಗಳ

(3ನೇ ಪುಟಕ್ಕೆ)

ಪದ್ಯದಂಕಣ

## ಶೂನ್ಯ

ಸೋವು, ನಲಿವು
ಜೀವನ್ಮರಣ
ಅಚೇತನದೊಂದಿಗೆ
ಸರಸ–ಸಲ್ಲಾಪದಿ
ಹೆಡೆ ತುಳಿದ ನಾಗರದಂತೆ
ಬುಸುಗುಟ್ಟಿ ಕಚ್ಚಬಂದಂತೆ,
ಕಡಲ ಅಲೆ ಬತ್ತಿತೋ
ಅಲೆ ಮೇಲೇರಿ ಬಂತೋ–
ಏನೊಂದೂ ಅರ್ಥವಾಗದೆ
ದಿಗ್ಭ್ರಮೆಯಿಂ ದೃಷ್ಟಿಸಿ
ಸೃಷ್ಟಿ ಸಹಜ ಮಾನವನಾಸೆ
ಆಕಾಂಕ್ಷೆಗಳಿಗೆ ಕಡಿವಾಣ
ವಿಲ್ಲವೆನ್ನುವುದರ್ಥವಾದಾಗ,
ಕಾಣುವುದು ಜಗತ್ತು
ಶೂನ್ಯ–ಬರಿ ಶೂನ್ಯ

—ಸರೋಜ ವೈ. ಜಿ
ಯಡಗೆರೆ

## ಭೋರ್ಗರೆವ ತುಂಗೆ

ಅಲೆ–ಅಲೆಯಾಗಿ
ನೀ ಹರಿದು ಹೋಗುವೆ
ಕಸ ಕಡ್ಡಿಗಳನು
ಜೊತೆಯಲ್ಲಿ ಒಯ್ಯುವೆ
ಗಿಡ–ಪೊಟರೆಗಳಿನ್ನದೆ
ನೀ ಹಾದು ಹೋಗುವೆ
ಮರದಿನ್ನೆಗಳನ್ನು
ಜೊತೆಯಲ್ಲಿ ಕರೆಯುವೆ
ಬಂಡೆಗಲ್ಲುಗಳಿಗೆ
ಅಪ್ಪಳಿಸಿ ಹರಿಯುವೆ
ಭೋರ್ಗರೆಯುತ್ತ
ಹಾಡನ್ನು ಹಾಡುತ್ತ
ನೀ ಹೋಗುವುದನ್ನು
ನೋಡುತ್ತಾ ನಿಂತರೆ
ಆಹಾ ಎಷ್ಟು ಚೆಂದ
ಎಷ್ಟು ಅಂದ
ನಿನ್ನ ಈ ಯೌವನ!

—ಎಸ್. ಆರ್. ಉಷಾ,
6ನೇ ತರಗತಿ,
ಶಾನುವಳ್ಳಿ

## ಏ ಗಿಣಿಯೇ ಬಾ ಗಿಣಿಯೇ

ಏ ಗಿಣಿಯೇ ಬಾ ಗಿಣಿಯೇ
ನನ್ನಲ್ಲಿ ಮಾತನಾಡು
ನಿನ್ನ ಬಣ್ಣ ಎಷ್ಟು ಅಂದ
ನಿನ್ನ ಧ್ವನಿ ಎಷ್ಟು ಚಂದ
ನನಗೂ ನಿನ್ನಂತೆ ಹಾರಲು ಕಲಿಸು
ರೆಕ್ಕೆ ಪುಕ್ಕ ಬಂದ ಮೇಲೆ
ನಾನೂ ಮರವನ್ನು ಸೇರುವೆ
ಹಣ್ಣು ತಿಂದು ನೀರು ಕುಡಿದು
ಮರದಲ್ಲಿ ವಾಸಿಸುವೆ
...ರದ ಗುಹೆಯನ್ನು ನೋಡುವೆ
ಚಿತ್ರದುರ್ಗದ ಕೋಟೆಯಲ್ಲಿ ನುಸಿಯುವೆ
ಕಾಳನು ಹುಡುಕುವೆ
ಆಕಾಶದಲ್ಲಿ ಹಾರುವೆ
ಏ ಗಿಣಿಯೇ ಬಾ ಗಿಣಿಯೇ
ನನ್ನಲ್ಲಿ ಮಾತನಾಡು.

ಟಿ. ಆರ್. ಸುರೇಶ
6ನೇ ತರಗತಿ, ಕೊಪ್ಪ

# ಮೂರ್ಖರಿಗೆ ಬುದ್ಧಿ ಹೇಳುವುದು ವ್ಯರ್ಥ

ಮಕ್ಕಳೇ, ಈಗ ನಿಮಗೊಂದು ಕತೆ ಹೇ ಳ್ತೀನಿ. ಒಂದು ಕಾಡು. ಆ ಕಾಡ್ನಲ್ಲಿ ಒಂದ್ ಮಂಗಗಳ ಹಿಂಡಿತ್ತು. ಹಿಂಡಿನಲ್ಲಿ ಕೆಲವು ನೂರು ಮಂಗಗಳಿದ್ದವು. ಅವುಗಳು ಒಮ್ಮೆ ಕಾಡ್ನಲ್ಲಿ ಏನೋ ಹಣ್ಣು ಹಂಪಲು ಆಹಾರ ಹುಡುಕ್ತಾ ತಿರುಗ್ತಾ ಸುತ್ತಾಡ್ತಿ ದ್ದಾಗ ಅನಿರೀಕ್ಷಿತವಾಗಿ ಒಂದು ಮಳೆ ಬಂ ದು ಬಿಡ್ತು. ಪಾಪ! ಮಳೆಯನ್ನು ನಿರೀಕ್ಷಿ ಸಿರದಿದ್ದ ಮಂಗಗಳು ಸುರಕ್ಷಿತ ಸ್ಥಾನ ಸೇರ ಲಾರದೇ ಮಳೆಗೆ ಸಿಕ್ಕಿ ನೆನೆದು ಹೋದವು. ಮಳೆ ಬಿಟ್ಟ ಕೂಡಲೇ ಚಳಿಯಿಂದ ಗಡ ಗಡ ನಡುಗುತ್ತಿದ್ದ ಅವುಗಳಿಗೆ ದೂರದಲ್ಲಿ ಗುಲಗಂಜಿ ಕಾಯಿಯ ಗೊಂಚಲುಗಳು ಬಿ ದ್ದದ್ದು ಕಾಣಿಸಿತು. ಅವುಗಳು ಅದನ್ನೇ ಬೆಂ ಕಿಯ ಕಿಡಿಗಳೆಂದು ಭ್ರಮಿಸಿ ಅದರ ಸುತ್ತಾ ಕುಳಿತುಕೊಂಡವು.

ಇದನ್ನೆಲ್ಲಾ ನೋಡುತ್ತಿದ್ದ ಒಂದು ಜಾಣ ಹಕ್ಕಿ ಅವುಗಳ ಬಳಿ ಬಂದು, "ಅಯ್ಯೋ, ಮಂಗಗಳ್ರಾ, ಈ ಗುಲಗಂಜಿ ಕಾಯಿಯ ಮುಂದೆ ಸುಮ್ಮನೆ ನಡುಗ್ತಾ ಯಾಕೆ ಕುಳಿ ತುಕೊಂಡಿದ್ದೀರಿ. ನೀವು ಇಲ್ಲಿ ಎಷ್ಟು ಹೊ ತ್ತು ಕುಳಿತರೂ ನಿಮ್ಮ ಮೈ ಬೆಚ್ಚಗಾಗುವು ದಿಲ್ಲ ಅಲ್ಲದೆ ಈಗ ಮತ್ತೆ ಮಳೆ ಬರುವ ಸೂಚನೆಯೂ ಕಾಣಿಸುತ್ತಿದೆ. ಆದ್ದರಿಂದ ಎಲ್ಲಾದರೂ ಸುರಕ್ಷಿತ ಜಾಗ ಸೇರಿಕೊಳ್ಳಿ" ಎಂದು ಹೇಳಿತು.

ಆದರೂ ಅವು ಅಲ್ಲಿಂದ ಕದಲಲಿಲ್ಲ. ಆ ಹಕ್ಕಿ ಮತ್ತೆ ಮತ್ತೆ ಅದನ್ನೇ ಹೇಳಿತು. (ಅವುಗಳ ಮೇಲಿನ ಕರುಣೆಯಿಂದ). ಕೊನೆ ಗೆ ಆ ಮಂಗಗಳಿಗೆ ಬುದ್ಧಿ ಬರುವ ಬದಲು ಆ ಹಕ್ಕಿಯ ಮೇಲೆ ಸಿಟ್ಟಾಗಿ ಎಲ್ಲವೂ ಸೇರಿ ಅದನ್ನು ಅಲ್ಲಿಂದ ಓಡಿಸಿದವು.

ಇದರ ನೀತಿ ಏನೂಂದ್ರೆ ಮೂರ್ಖರಿಗೆ ಬುದ್ಧಿ ಹೇಳಲು ಹೋಗಬಾರ್ದು ಅಂತ.

ಇದಿಷ್ಟು ಪಂಚತಂತ್ರದ ಕಥೆ ಅನ್ನಿ. ಆದರೆ ಮಕ್ಕಳೇ, ನೀವೀಗ ಯೋಚ್ನೆ ಮಾ ಡಿ. ಆ ಮಂಗಗಳು ಹಕ್ಕಿಯನ್ನು ಓಡಿಸಿದ್ದು ಸರಿಯೆ? ಹಾಗೆ ಓಡಿಸಿದ ಮಾತ್ರಕ್ಕೆ ಅವು ಗಳ ಚಳಿ ಹೋಯಿತೆ? ಅಥವಾ ಆ ಹಕ್ಕಿ ಅವುಗಳಿಗೇ ಉಪಯೋಗವಾಗಲೆಂದು ಬುದ್ಧಿ ಹೇಳಲು ಹೋಗಿದ್ದು ತಪ್ಪೆ?

(ಕಥೆ ಹೇಳಿದವರು : ಕಣ್ಣ ಚಿಕ್ಕಪ್ಪ)

## ಜಾಣ ಪ್ರಶ್ನೆಗಳಿಗೆ ಉತ್ತರಗಳು

1. ಹೋಗುವಾಗ 5, ಬರುವಾಗ 15, ಏನದು?

ಏಡಿ ಹಿಡಿಯಲು ಕುಣಿಗೆ ಹೋಗುವ ಕೈಯ ಬೆರಳು 5, ಏಡಿ ಹಿಡಿದು ತರುವಾಗ ಅದರ 10 ಬೆರಳು ಸೇರಿ 15.

2. ಅತ್ಯಂತ ಪ್ರಾಚೀನ ನಾಗರಿಕತೆ– ಈಜಿಪ್ಟ್ ದೇಶದ ನಾಗರಿಕತೆ.

3. ದ್ರಾಕ್ಷಿ ಹಣ್ಣಿನ ಮಾದಕ ಪಾನೀಯ ವನ್ನು ಮೊದಲು ತಯಾರಿಸಿದ ದೇಶ– ಚೀನಾ.




4. 'ತೂಗಾಡುವ ತೋಟ್ಟಿಲ'ನ್ನು ಸ್ಥಾ ಪಿಸಿದವನು— ಬ್ಯಾಬಿಲೋನಿಯದ ದೊರೆ ನೆಬು ಖಡ್ನೇಜರ್.

5. ಅತ್ಯಂತ ದೊಡ್ಡ ಪಿರಮಿಡ್— ಈಜಿಪ್ಟ್‌ನ ಗಿಜಾದಲ್ಲಿದೆ. ಇದು ಚಿಯೋಪ್ ಕುಪ್ಸ ಅರಸನದು.

[ಈ ಬಾರಿ ಯಾವ ಮಕ್ಕಳೂ 'ಜಾಣ ಪ್ರಶ್ನೆ'ಗಳಿಗೆ ಉತ್ತರಿಸಿಲ್ಲ. 'ಜಾಣ ಪ್ರಶ್ನೆ' ಗಳು ಜಾಣರಿಗೆ ಇರಲಿ. ನಮಗೇಕೆ? ಎನ್ನು ತ್ತೀರಾ? ಯಾಕೆ ಮಕ್ಕಳೆ, ಕತೆ ಕೇಳು ವುದು ಮಾತ್ರ ಇಷ್ಟವಾ? ಬುದ್ಧಿಗೆ ವ್ಯಾ ಯಾಮ ಕೊಡುವುದು ಕಷ್ಟವಾ? ಈ ಬಾರಿಯ ಪ್ರಶ್ನೆಗಳಿಗೆ ಜಾಣರಾಗಿರಿ ನೋ ಡೋಣ! —ಸಂಪಾದಕ]

## ಇನ್ನಷ್ಟು ಜಾಣ ಪ್ರಶ್ನೆಗಳು

1. ಮನುಷ್ಯರು ಯಾವಾಗ ಪ್ರಶಾಂತ ರಾಗಿರುತ್ತಾರೆ ?

2. ಇಟ್ಟು ಕೊಳ್ಳಬೇಕೆಂದರೂ ಇಟ್ಟು ಕೊಳ್ಳಲಾಗದುದು ಏನು ?

3. ನಿಲ್ಲೆಂದರೂ ನಿಲ್ಲದಿರುವುದು ಯಾ ವುದು ?

4. ರೇಡಿಯೋ ಕಂಡು ಹಿಡಿದವನು ಯಾರು ?

—ಸಂಗ್ರಹ: ಸತೀಶ ಎಂ. ಕೆ.
10ನೇ ತರಗತಿ, ಜಯಪುರ

# ದಲಿತರ ನರಮೇಧ ನಡೆದಂಥ ಆಂಧ್ರದ ಚಿರಾಲದಲ್ಲಿ ಚಿರಸ್ಮರಣೀಯ 'ವಿಜಯನಗರ'ವನ್ನು ಸ್ಥಾಪಿಸಿದ ದಲಿತ ಮಹಾ ಸಭಾ

1985ನೇ ಜುಲೈ 17 ರಂದು ನಮ್ಮ ಪಕ್ಕದ ರಾಜ್ಯವಾದ ಆಂಧ್ರ ಪ್ರದೇಶದ ಕಾರಂಚೇಡುವಿನಲ್ಲಿ ದಲಿತರು ಬಾವಿಯ ನೀರನ್ನು ಮುಟ್ಟಿದ್ದನ್ನು ಸಹಿಸದ ಅಲ್ಲಿನ ಮೇಲ್ಜಾತಿಯಾದ ಕಮ್ಮ ಜನಾಂಗದವರು ಗುಂಪು–ಗುಂಪುಗಳಾಗಿ ದಲಿತರ ಕೇರಿಗೆ ನುಗ್ಗಿ, ಹಾಲು ಕುಡಿಯುವ ಮುಗ್ಧ ಕಂದಮ್ಮಗಳಿಂದ ಹಿಡಿದು 80 ವರ್ಷದ ವೃದ್ಧರವರೆಗೆ ಎದುರು ಸಿಕ್ಕ ಸಿಕ್ಕವರನ್ನು ಕೊಡಲಿ, ಮಚ್ಚು, ದೊಣ್ಣೆಗಳಿಂದ ಥಳಿಸಿ ನರಮೇಧ ನಡೆಸಿದರು. ನೂರಾರು ಅಸಹಾಯಕ ದಲಿತರು ಕಿವಿ, ಕಣ್ಣು, ಮೂಗು, ಕೈಕಾಲುಗಳನ್ನು ಕಳೆದುಕೊಂಡು ಅಂಗವಿಕಲರಾದರೆ, ಎಂಟು ಜನ ಕೊಲೆಯಾದರು. ಇಬ್ಬರು ಮಹಿಳೆಯರ ಮೇಲೆ ಅತ್ಯಾಚಾರ; ಒಬ್ಬ ಗರ್ಭಿಣಿಯ ಹೊಟ್ಟೆಗೆ ಭರ್ಜಿಯಿಂದ ತಿವಿದು ಕರುಳು ಬಗೆಯಲಾಯಿತು.

ಈ ಮೇಲ್ಕಂಡ ದುರ್ಘಟನೆಯಿಂದ ಜಾಗೃತವಾದ ದಲಿತರ ಸ್ವಾಭಿಮಾನದ ಸಂಕೇತವಾಗಿ, ಕತ್ತಿ ಪದ್ಮರಾವ್, ಬೊಜ್ಜ ತಾರಕಂ ನೇತೃತ್ವದಲ್ಲೊಂದು "ಆಂಧ್ರ ದಲಿತ ಮಹಾಸಭಾ" ರೂಪುಗೊಂಡಿತು. ಆಂಧ್ರ ಸರ್ಕಾರದ ಮುಖ್ಯಮಂತ್ರಿ ಎನ್. ಟಿ. ರಾಮರಾವ್ ತಮ್ಮ ಜಾತಿಯ ಸಂಬಂಧಿಕರು ನಡೆಸಿದ ಹಲ್ಲೆಯನ್ನು ಮುಚ್ಚಿಹಾಕಲು 50 ಸಾವಿರ ರೂ. ಗಳ 'ಪರಿಹಾರ' ಘೋಷಣೆ ಮಾಡಿದರು. ಆದರೆ ಈ ಪರಿಹಾರವನ್ನು ತಿರಸ್ಕರಿಸಿ, ಕೊಲೆಗಡುಕರ ಮೇಲೆ ಕ್ರಮ ಜರುಗಿಸಲು ದಲಿತರು ಹೋರಾಟ ನಡೆಸಿದರು. ಅದನ್ನು ಹತ್ತಿಕ್ಕಲು ತನ್ನ ಬತ್ತಳಿಕೆಯಲ್ಲಿದ್ದ ತಂತ್ರಗಳನ್ನೆಲ್ಲ ಬಳಸಿತು ಸರ್ಕಾರ.

ಧೃತಿಗೆಡದ ದಲಿತರು ಎನ್. ಟಿ. ಆರ್. ಸರ್ಕಾರಕ್ಕೆ ಸವಾಲೆಸೆದು, ದಲಿತರ ಹಿತೈಷಿಗಳು, ಪ್ರಗತಿಪರ ಚಿಂತಕರ ನೆರವಿನಿಂದ ವಂತಿಗೆ ಸಂಗ್ರಹ ಮಾಡಿ, ಚಿರಾಲದಲ್ಲಿ ತಾವೇ ಸ್ವತಃ 50 ಎಕರೆ ಭೂಮಿ ಕೊಂಡುಕೊಂಡು, 470 ಆರ್.ಸಿ.ಸಿ. ಟೈಪು ಮನೆಗಳನ್ನು ನಿರ್ಮಿಸಿಕೊಂಡು, ಒಂದು ಸಣ್ಣ ಗುಡಿ ಕೈಗಾರಿಕೆ ಸ್ಥಾಪಿಸಿಕೊಂಡಿದ್ದಾರೆ. ಅದು "ವಿಜಯನಗರ"ವಾಗಿ ರೂಪುಗೊಂಡಿದೆ.

ಕಳೆದ ಎರಡು ವರ್ಷಗಳ ನಂತರ 1987 ಜುಲೈ 17 ರಂದು ಗತವಾದ ಘಟನೆಗಳನ್ನು ನೆನಪು ಮಾಡಿಕೊಳ್ಳುತ್ತಾ ಮುಗ್ಧ ದಲಿತರ ಎದೆಗೆ ಸ್ವಾಭಿಮಾನದ ಕಿಚ್ಚನ್ನು ಹೊತ್ತಿಸುವುದರೊಂದಿಗೆ ಅಂದು ಮಧ್ಯಾಹ್ನ 12 ಗಂಟೆಗೆ ಚಿರಾಲದಲ್ಲಿ 20 ಸಾವಿರ ಜನರ ಜೈಕಾರದೊಡನೆ 'ವಿಜಯನಗರ' ಉದ್ಘಾಟನೆಯಾಯಿತು. ಈ ಕಾರ್ಯಕ್ರಮದಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಒಂದು ಸಾವಿರಕ್ಕೂ ಹೆಚ್ಚು ಸದಸ್ಯರು ಭಾಗವಹಿಸಿದ್ದರು ಮಹಾರಾಷ್ಟ್ರ, ಆಂಧ್ರ ರಾಜ್ಯಗಳ ಎಲ್ಲೆಡೆಯಿಂದಲೂ ಪ್ರತಿನಿಧಿಗಳು ಬಂದಿದ್ದರು.

"ದಮನ–ದಬ್ಬಾಳಿಕೆಗಳು ಬದಲಾವಣೆಗಳನ್ನು ತಡೆಯಲಾರವು" ಎಂಬ ಡಾ|| ಅಂಬೇಡ್ಕರ್ ನುಡಿಯಂತೆ, ಆಂಧ್ರ ದಲಿತ ಮಹಾಸಭಾ, ಕರ್ನಾಟಕ ದಲಿತಸಂಘರ್ಷ ಸಮಿತಿಯಂಥ ಸಂಘಟನೆಗಳು ಶೋಷಿತ ದಲಿತರ ವಿಮೋಚನೆಗೆ ರಾಷ್ಟ್ರವ್ಯಾಪಿಯಾಗಿ ದಲಿತರಸ್ವಾಭಿಮಾನದ ಹೆಜ್ಜೆ ಹಾಕುತ್ತಿವೆ.

**ಹೋರಾಟದ ಸಾಗರದೊಡನೆ ಬಡವರೆಲ್ಲರೂ ಕೂಡಿ ಬನ್ನಿ.**

– ಕರ್ನಾಟಕ ದಲಿತ ಸಂಘರ್ಷ ಸಮಿತಿ

## 'ರೈತರ ಹಿತ ಕಾಯುವೆ': ನೂತನ ವ್ಯ.ಮಾ.ಸ. ಅಧ್ಯಕ್ಷರ ಭರವಸೆ

ಮಾನ್ಯರೆ,

ಜು. 29ರಂದು ನಡೆದ ಶಿವಮೊಗ್ಗ ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿ ಅಧ್ಯಕ್ಷರ ಚುನಾವಣೆಯಲ್ಲಿ ನನ್ನನ್ನು ಅವಿರೋಧವಾಗಿ ಅಧ್ಯಕ್ಷರಾಗಿ ಆಯ್ಕೆ ಮಾಡಿರುವುದಕ್ಕಾಗಿ ಸಮಿತಿಯ ಎಲ್ಲ ಸದಸ್ಯರಿಗೆ ಹೃತ್ಪೂರ್ವಕ ಕೃತಜ್ಞತೆ ಸಲ್ಲಿಸುತ್ತೇನೆ. **ಹಿಂದಿನ ಅಧ್ಯಕ್ಷರಾದ ಶ್ರೀ ಕೆ. ಎಸ್. ವೀರಪ್ಪಗೌಡರು ಹಾಕಿ ಕೊಟ್ಟ ದಾರಿಯಲ್ಲೇ ಸಂಸ್ಥೆಯನ್ನು ಮುನ್ನಡೆಸುವ ಹಾಗೂ ಎಲ್ಲ ರೈತ ಬಾಂಧವರ ಹಿತವನ್ನು ಕಾಯುವ ಮತ್ತು ಸಮಿತಿಯ ಸರ್ವತೋಮುಖ ಅಭಿವೃದ್ಧಿಗಾಗಿ** ಶ್ರಮಿಸುವ ಭರವಸೆ ನೀಡಿ ನನ್ನ ಕಾರ್ಯದಲ್ಲಿ ಎಲ್ಲ ಸದಸ್ಯರ, ಅಭಿಮಾನಿಗಳ, ಪತ್ರಿಕಾ ಮತ್ತು ಸಮೂಹ ಮಾಧ್ಯಮಗಳ, ಅಧಿಕಾರಿಗಳ ಹಾಗೂ ಸಂಬಂಧಪಟ್ಟವರೆಲ್ಲರ ಸಹಕಾರ ಹಾಗೂ ಸಲಹೆ–ಸೂಚನೆಗಳನ್ನು ವಿನಂತಿಸುತ್ತೇನೆ.

—ಎಸ್. ಬಿ. ಕೃಷ್ಣಪ್ಪ, ಶಿವಮೊಗ್ಗ

## ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿವೇತನಕ್ಕೆ ಅರ್ಜಿ ಆಹ್ವಾನ

ಚಿಕ್ಕಮಗಳೂರು: ವಿವಿಧ ಉದ್ದಿಮೆಗಳಲ್ಲಿ ದುಡಿಯುತ್ತಿರುವ ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿ ವೇತನವನ್ನು ನೀಡಲು ವೆಲ್ಫೇರ್ ಕಮಿಶನರ್, ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ, ವಿ ಐ ಎಸ್. ಎಲ್. ಕಟ್ಟಡ, ಬೆಂಗಳೂರು ಇವರು ಅರ್ಹ ವಿದ್ಯಾರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಿದ್ದಾರೆ. ಆಯಾ ತಾಲ್ಲೂಕಿನ ಕಾರ್ಮಿಕ ಇಲಾಖೆಯ ಕಛೇರಿಯಿಂದ ಅರ್ಜಿ ಫಾರಂ ಪಡೆಯಬಹುದಾಗಿದೆ.

ಹಿಂದಿನ ಪರೀಕ್ಷೆಯಲ್ಲಿ ವಿದ್ಯಾರ್ಥಿಯು ಕನಿಷ್ಠ ಶೇ. ೫೦ ಅಂಕಗಳನ್ನು ಪಡೆದಿರಬೇಕು (ಪರಿಶಿಷ್ಟ ಜಾತಿ ಹಾಗೂ ಪಂಗಡಗಳಿಗೆ ಶೇ. ೪೦). ಅಭ್ಯರ್ಥಿಯ ತಂದೆ/ಪೋಷಕರ ತಿಂಗಳ ವರಮಾನ ೧೬೦೦ರೂ. ಮೀರಿರಬಾರದು. ೮ ನೇ ತರಗತಿಯಿಂದ ಮೇಲ್ಪಟ್ಟು, ಪದವಿ ಹಾಗೂ ಸ್ನಾತಕೋತ್ತರ ತರಗತಿಗಳು ಹಾಗೂ ಎಲ್ಲಾ ರೀತಿಯ ತಾಂತ್ರಿಕ ಹಾಗೂ ವೃತ್ತಿ ಸಂಬಂಧವಾದ ಕೋರ್ಸ್‌ಗಳಲ್ಲಿ (ಶೀಘ್ರಲಿಪಿ, ಬೆರಳಚ್ಚು ತರಬೇತಿ, ನರ್ಸಿಂಗ್, ಫಾರ್ಮಸಿ, ಸೂಲಗಿತ್ತಿ ತರಬೇತಿ, ಉಪಾಧ್ಯಾಯ ವೃತ್ತಿ, ಕುಶಲ ಕಲೆ ಇತ್ಯಾದಿ) ಓದುತ್ತಿರುವ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸಬಹುದಾಗಿದೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ ಆಗಸ್ಟ್ ೩೧.

## 'ಪರಿಸರ ಸಮತೋಲನದಲ್ಲಿ ಅರಣ್ಯಗಳ ಪಾತ್ರ'

ಕಲ್ಲುಗುಡ್ಡೆ: ಇಲ್ಲಿನ ಹಿರಿಯ ಪ್ರಾಥಮಿಕ ಶಾಲೆ ಆವರಣದಲ್ಲಿ ಜು. 18 ರಂದು ವನಮಹೋತ್ಸವ ಕಾರ್ಯಕ್ರಮವನ್ನು ಶಾಸಕ ಗೋವಿಂದ ಗೌಡರು ಗಿಡ ನೆಡುವುದರೊಂದಿಗೆ ಉದ್ಘಾಟಿಸಿದರು. ಮಂಡಲ ಪಂಚಾಯ್ತಿ ಪ್ರಧಾನರಾದ ಬಿ. ಎಲ್. ಭಾಸ್ಕರ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಕೊಪ್ಪ ಉಪ ಅರಣ್ಯ ಸಂರಕ್ಷಣಾಧಿಕಾರಿ ಕಿಶನ್ ಸಿಂಗ್ ಸುಗಾರ ಗ್ರಾಮಸ್ಥರಿಗೆ ಉಚಿತ ಸಸಿಗಳ ವಿತರಣೆ ಮಾಡಿದರು. ಎ.ಎಂ. ಅನಂತದಾಸ್, ಕೆ.ಆರ್. ದೇವೇಂದ್ರ, ಜಿ.ಕೆ. ಶಿವಶಂಕರ್, ಬಿ. ರಮೇಶ ರಾವ್, ಜಿ. ಸಿ. ಗೋಪಾಲಕೃಷ್ಣ, ಬಿ. ಕೆ. ವೆಂಕಪ್ಪಯ್ಯ ಮುಖ್ಯ ಅತಿಥಿಗಳಾಗಿದ್ದರು.

(4ನೇ ಪುಟಕ್ಕೆ)

## "ಮಕ್ಕಳಿಗೆ ಮರ ಗಿಡಗಳ ಬಗ್ಗೆ ಶಾಲೆಯಿಂದಲೇ ಪ್ರೀತಿ ಹುಟ್ಟಿಸಿ"

ಶೃಂಗೇರಿ: ಪ್ರಾಥಮಿಕ ಶಾಲೆಯ ಹಂತದಿಂದಲೇ ಮಕ್ಕಳಿಗೆ ಮರಗಿಡಗಳ ಬಗ್ಗೆ ತಿಳುವಳಿಕೆ, ಪ್ರೀತಿ ಹುಟ್ಟುವಂತೆ ಮಾಡಿದರೆ ಅವರು ಪ್ರಬುದ್ಧರಾಗುವ ವೇಳೆಗೆ ಅವರದೇ ಆದ ಮರಗಳು ಅವರ ಉಪಯೋಗಕ್ಕೆ ನಿಲ್ಲುತ್ತವೆ ಎಂದು ಶಾಸಕ ಗೋವಿಂದ ಗೌಡರು ಹೇಳಿದರು.

ಇಲ್ಲಿಗೆ ಸಮೀಪದ ಕುಂಚೆಬೈಲಿನ ಶಾಲಾ ವನದಲ್ಲಿ ಜು.19 ರಂದು ವನಮಹೋತ್ಸವವನ್ನು ಉದ್ಘಾಟಿಸಿ ಮಾತನಾಡುತ್ತಿದ್ದ ಅವರು ಬೇಲಿಗೆ ಮರದ ಮುಂಡಿನ ಬದಲು ಕಲ್ಲು ಮುಂಡುಗಳನ್ನು ಬಳಸುವುದರಿಂದ ಕಾಡಿನ ನಾಶವೂ ಕಡಿಮೆಯಾಗುತ್ತದೆ, ಕಲ್ಲು ಮುಂಡು ಮುಂದೆಯೂ ಉಪಯೋಗಕ್ಕೆ ಬರುತ್ತದೆ ಎಂದರು.

ಇಂದು ಎಲ್ಲಾ ರಂಗದಲ್ಲೂ ಮಿತಿಮೀರಿ ವ್ಯಾಪಿಸುತ್ತಿರುವ ಭ್ರಷ್ಟತೆಯಿಂದಾಗಿ ಕಾಡೊಂದೇ ಅಲ್ಲ, ಎಲ್ಲವೂ ನಾಶವಾಗುತ್ತಿದ್ದು,

(4ನೇ ಪುಟಕ್ಕೆ)

## ಜನತಾಕ್ಕೆ ಕಗ್ಗಂಟಾದ ಕೆ. ಸಿ. ವೆಂಕಟೇಶ್

(2ನೇ ಪುಟದಿಂದ)

ಕೈವಾಡದಲ್ಲಿವೆ. ದೀಪ ಹೋಯ್ತು, ಕತ್ತಲೆಯಾಯ್ತು– ಕಗ್ಗ ನಗದ್ದೆ ಹುಡುಗ ಕಾಲಿಟ್ಟಗಳಿಗೆ........! ಮೂತ್ರಿ ನಾರುತ್ತಿದೆ– ಈ ಪ್ರಧಾನ ಬಂದ ಗಳಿಗೆ....!! ಸರ್ಕಾರಿ ಬಸ್ ತಡವಾಗಿ ಬರ್ತಾ ಇದೆ–ಈ ಪ್ರಧಾನ....!!! ಹೀಗೆ ಎಲ್ಲಕ್ಕೂ ಕಾರಣೀಭೂತರಾಗುವ ಈ ಪ್ರಧಾನ ಪಟ್ಟ ಮುಳ್ಳಿನ ಮಂಚಿಗೆ ಇದ್ದಂತೆ. ಮುಳ್ಳು ಚುಚ್ಚಿಸಿಕೊಂಡು ಗಟ್ಟಿಯಾದ ಮೇಲೆ ಯಾವುದೇ ಚುನಾವಣೆ ಬಂದರೂ ಬೆಂಬಲಿಗರಿಲ್ಲದೆ ಬಂಡಾಯವೇಳಬಹುದು!

ನಾಮಿಕವಾಗಿಯಾಗಲೀ, ಅನಾಮಿಕವಾಗಿಯಾಗಲೀ, ಈ ಪ್ರಧಾನರ ಬಗ್ಗೆ ಲೋಪದೋಷಗಳು ಕೇಳಿಬರುವುದಿಲ್ಲ. ಹುರುಪಿನಿಂದ ಬಂದ ಹುಡುಗರಿಂದ ಪ್ರಗತಿಯ ಕೆಲಸ ಕಾರ್ಯಗಳಿಗೆ ಸಲಹೆ–ಸಹಕಾರ ನೀಡಿ ಉತ್ತಮ ಕಾರ್ಯ ಸಾಧನೆ ಮಾಡಿಕೊಳ್ಳುವುದರಲ್ಲಿ ಒಳಿತಿದೆ. ಮಂಡಲಗಳು ಮಾಡೋ ಮಂತ್ರಾಳ ಕೆಲಸಕ್ಕೆ ಹುರುಪಿನ ಹುಡುಗರನ್ನ ಬಲಿಪಶುಗಳನ್ನಾಗಿ ಮಾಡುವುದು ಸಮಾಜಕ್ಕೆ ಮಾರಕವಾದೀತು.

ಜನತಾ ಸ್ಪರ್ಧಿ ಕೃಷ್ಣಸ್ವಾಮಿಯವರನ್ನು ಬೆಂಬಲಿಸದಿರಲು "ಕೃಷ್ಣಸ್ವಾಮಿಯವರ ಕೈ ಬಾಯಿ ಅಶುದ್ಧ" ಎಂಬ ಮಾತು ಪ್ರತಿಧ್ವನಿಸುತ್ತದೆ. ಕಚ್ಚೆ, ಕೈ, ಬಾಯಿಗಳು ಸರಿಯಿಲ್ಲದ ಮಂತ್ರಿ ಶಾಸಕರುಗಳಿರುವಾಗ, ಅದರಲ್ಲಿಯೂ ಮುಸ್ಲಿಂ ರಾಷ್ಟ್ರಗಳಲ್ಲಿರುವಂತೆ ಅಶುದ್ಧ ಗುಣವವರ ಕೈ ಕತ್ತರಿಸುವ ಶಿಕ್ಷೆ ನಮ್ಮ ದೇಶದಲ್ಲಿಯೂ ಇದ್ದಿದ್ದರೆ ಶೇಕಡ 50 ಭಾಗ ಮುಂಡುಗೈನ ಪ್ರಧಾನರನ್ನು, ಜುಬ್ಬದಲ್ಲಿ ಮುಂಡುಗೈ ಮುಚ್ಚಿಕೊಳ್ಳುವ ಅನೇಕ ಮಂತ್ರಿ–ಶಾಸಕರನ್ನ ಕಾಣುತ್ತಿದ್ದೆವು! ಎಂಥಾ ದೌರ್ಭಾಗ್ಯ ನಮ್ಮದು ಅಲ್ಲವೆ....?

ನರಸಿಂಹರಾಜಪುರ ನಾಮಕಾವಾಸ್ತೆ ತಾಲ್ಲೂಕ್ ಕೇಂದ್ರವಾಗಿದ್ದರೂ, ಹೋಬಳಿ ಕೇಂದ್ರವಾದ ಬಾಳೆಹೊನ್ನೂರು ಉತ್ತಮ ಪ್ರಗತಿ ಸಾಧಿಸಿರುವುದು ಹೆಮ್ಮೆಯವಿಚಾರ. ಈ ಮಂಡಲ ಹೋಬಳಿ ಕೇಂದ್ರದ ಜೊತೆಗೆ ನಾಡ ಕಚೇರಿಯನ್ನೂ ಇತ್ತೀಚಿಗೆ ಹೊಂದಿದ್ದು ಈ ನಾಡ ಕಛೇರಿಯ ಉತ್ತಮ ಪ್ರಗತಿ ಕಾರ್ಯಗಳು ಹೋಬಳಿಯ ಸುಮೂಲೆ–ಮೂಲೆಗೂ ತಲುಪುವಂತೆ ಎಚ್ಚರ ವಹಿಸಿದರೆ ಮಂಡಲ ಪ್ರಧಾನ ಎನ್ನುವುದಕ್ಕಿಂತ ಹೋಬಳಿ ಪ್ರಧಾನರೆಂದೇ ಪ್ರಸಿದ್ಧರಾಗಬಹುದು.

ದ್ವೇಷಾಸೂಯೆಗಳನ್ನು ಮರೆತು ಉತ್ತಮ ಪ್ರಗತಿ ಸಾಧಿಸಲೆಂದೂ ಹಾಗೂ ಯುವಕರತನದ ಸದುಪಯೋಗವಾಗಲೆಂದೂ ಈ ಪ್ರಧಾನರನ್ನು ಹಾರೈಸುತ್ತೇನೆ.

—ಎಂ.ಐ. ಶ್ರೀನಿವಾಸಮೂರ್ತಿ
ಮೂಡುಬಾಗಿಲು

# ಪರಿಸರ ಸಮತೋಲನಕ್ಕೆ ಅರಣ್ಯ ಅನಿವಾರ್ಯ

(3ನೇ ಪುಟದಿಂದ)

ಉದ್ಘಾಟನಾ ಭಾಷಣ ಮಾಡುತ್ತಾ ಗೋವಿಂದ ಗೌಡರು, ಅರಣ್ಯ ಸಂರಕ್ಷಿಸುವಲ್ಲಿ ಮತ್ತು ಬೆಳೆಸುವಲ್ಲಿ ಇಲಾಖೆಯೊಂದಿಗೆ ಪ್ರತಿಯೊಬ್ಬ ಪ್ರಜೆಯೂ ಹೊಣೆಗಾರಿಕೆ ಅರಿತು ಸಹಕರಿಸಬೇಕೆಂದು ಕರೆ ಇತ್ತರು. ಕಿಶನ್ ಸಿಂಗ್ ಸುಗಾರ ಅವರು, ಕನ್ನಡ ಮಾತನಾಡಲು ಸರಿಯಾಗಿ ಬಾರದಿದ್ದರೂ ಪ್ರಯತ್ನ ಪೂರ್ವಕವಾಗಿ ಕನ್ನಡದಲ್ಲೇ ಮಾತನಾಡಿ, ಪರಿಸರ ಸಮತೋಲನದಲ್ಲಿ ಅರಣ್ಯದ ಪಾತ್ರದ ಬಗ್ಗೆ ವಿವರಿಸಿದರು.

ಮಂಡಲ ಪಂಚಾಯ್ತಿ ಸದಸ್ಯ ಹಾಗೂ ಸ್ಥಳೀಯ ಯುವಕ ಸಂಘದ ಅಧ್ಯಕ್ಷರಾದ ಜೆ. ಕೆ. ಶಿವಶಂಕರ್ ಗ್ರಾಮದ ಅವಶ್ಯಕತೆಗಳಾದ ರಸ್ತೆ, ವಿದ್ಯುಚ್ಛಕ್ತಿಯ ಅವ್ಯವಸ್ಥೆ, ಭೂ ರಹಿತ ಕೃಷಿ ಕಾರ್ಮಿಕರ ದರ್ಖಾಸ್ತು, ಶಾಲಾ ಉಪಾಧ್ಯಾಯರ ಕೊರತೆ-ಮುಂತಾದುವುಗಳ ಬಗ್ಗೆ ಮನವಿಯೊಂದನ್ನು ಸಲ್ಲಿಸಿದರು.

ಬಿ. ಎಸ್. ಭಾಸ್ಕರ್ ಮಾತನಾಡಿ, ಯಾರೂ ಉದ್ದೇಶ ಪೂರ್ವಕವಾಗಿ ಸಮಸ್ಯೆಗಳನ್ನು ಸೃಷ್ಟಿ ಮಾಡದೆ, ಇರುವ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸಬೇಕೆಂದು ವಿನಂತಿಸಿದರು.

ಎ. ಎಲ್. ಪುಂಡರೀಕ ಸ್ವಾಗತಿಸಿ, ಬಿ ವಿ. ಶ್ರೀಧರ್ ರಾವ್ ಅತಿಥಿಗಳನ್ನು ಪರಿಚಯಿಸಿದರು. ಶಂಭು ಶಂಕರ ಶೆಟ್ಟಿ ವಂದಿಸಿದರು.

(ವರದಿ: ಬಿ. ಕೆ. ಲಕ್ಷ್ಮೀನಾರಾಯಣ)

## 'ನಿಷ್ಠೆಯಿಂದ ದುಡಿದು ಓಟಿನ ಋಣ ತೀರಿಸಿ'

ಬಿಳಾಲ್‌ಕೊಪ್ಪ: ರಾಮರಾಜ್ಯದ ಕನಸು ನನಸಾಗಲು ನಿಷ್ಠೆಯಿಂದ ಕೆಲಸಮಾಡಿ ಮತದಾರರು ನೀಡಿದ ಓಟಿನ ಋಣ ತೀರಿಸಿಕೊಳ್ಳುವಂತೆ ನೂತನವಾಗಿ ಕಾರ್ಯರೂಪಕ್ಕೆ ಬಂದ ಮಂಡಲ ಪಂಚಾಯಿತಿ ಪ್ರತಿನಿಧಿಗಳಿಗೆ ಶಾಸಕ ಗೋವಿಂದ ಗೌಡರು ಕರೆ ನೀಡಿದರು.

ಅವರು ಈಚೆಗೆ ಇಲ್ಲಿ ಅತ್ತಿಕುಡಿಗೆ ಮಂಡಲ ಪಂಚಾಯಿತಿಯನ್ನು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಮಂಡಲ ಪ್ರಧಾನ ಬಿ.ಎನ್. ಭಾಸ್ಕರ್ ಅಧ್ಯಕ್ಷತೆ ವಹಿಸಿದ್ದರು. (ವರದಿ: ಎಂ.ವಿ ಗಂಗಾಧರ್)

## ನ.ರಾ.ಪುರ: 16 ಸಾವಿರ ರೂ. ಬೆಲೆಯ ಗಂಧ ವಶ, ಇಬ್ಬರ ಸೆರೆ

ನ. ರಾ. ಪುರ: ಚಿಕ್ಕಗ್ರಹಾರ ವಲಯದ ಫಾರೆಸ್ಟರ್ ಶಾಂತಕುಮಾರ್ ಮತ್ತು ಸಿಬ್ಬಂದಿಯವರು ಜು. 29 ರಂದು ಎಂಇಒ 804 ನಂಬರಿನ ಕಾರಿನಲ್ಲಿ ಸಾಗಿಸುತ್ತಿದ್ದ ಸುಮಾರು 16 ಸಾವಿರ ರೂ. ಬೆಲೆಯ 217 ಕಿಲೊ ಗಂಧವನ್ನು ಹಿಡಿದಿದ್ದಾರೆ. ಕಣತಿಯ ನೂರ್ ಮತ್ತು ಆಳೇಹಳ್ಳಿಯ ಕೃಷ್ಣ ಎಂಬಿಬ್ಬರು ಆರೋಪಿಗಳು ಸೆರೆ ಸಿಕ್ಕಿದ್ದು, ಕಾರನ್ನು ವಶ ಪಡಿಸಿಕೊಳ್ಳಲಾಗಿದೆ. ಆಳೇಹಳ್ಳಿ, ಕೂಸಗಲ್ ಕಡೆಯವರಾದ ನಾಗೇಶ, ಜನಾರ್ದನ, ಜಯರಾಂ, ಶ್ರೀನಿವಾಸ ಎಂಬ 4 ಆರೋಪಿಗಳು ತಲೆ ತಪ್ಪಿಸಿಕೊಂಡಿದ್ದಾರೆ. ಸೆರೆ ಸಿಕ್ಕವರನ್ನು ನ್ಯಾಯಾಂಗ ಬಂಧನಕ್ಕೊಳಪಡಿಸಲಾಗಿದೆ.

ವಲಯ ಅರಣ್ಯಾಧಿಕಾರಿ ಕೆ. ಎಸ್. ಲಕ್ಷ್ಮೀನಾರಾಯಣ್ ಮುಂದಿನ ತನಿಖೆ ನಡೆಸಿದ್ದಾರೆ.

## ಮಕ್ಕಳಿಗೆ ಮರ ಗಿಡಗಳ ಬಗ್ಗೆ ಪ್ರೀತಿ ಹುಟ್ಟಿಸಿ

(3ನೇ ಪುಟದಿಂದ)

ನಮ್ಮ ಮುಂದೆ ಕುಳಿತ ಈ ಮಕ್ಕಳಿಗೆ ನಾವು ಏನು ಉಳಿಸಿ ಹೋಗುತ್ತೇವೆಯೋ ಎಂದ ಅವರು, ನೆಮ್ಮಾರು ಹಂದಿ ಸಾಕಣೆ ಕೇಂದ್ರದ ಫಲಾನುಭವಿಗಳಿಗೆ ಅನ್ಯಾಯ ಮಾಡಿ, ಅದರ ಮೇಲೆ ಅವರಿಂದ ದಾಖಲೆಗಳಿಗೆ ಮೋಸದಲ್ಲಿ ಅಧಿಕಾರಿಗಳು ಸಹಿ ಪಡೆದ ಬಗ್ಗೆ ಬಹಳ ಉದ್ವೇಗದಿಂದ ಮಾತನಾಡಿ, ಹರಿಜನರಿಗೆ, ದುರ್ಬಲರಿಗೆ ಈ ಸಮಾಜ ವ್ಯವಸ್ಥಿತವಾಗಿ ಮೋಸ ಮಾಡುತ್ತಾ ಬಂದಿದೆ. ಆದರೆ ಇದಕ್ಕೆ ಕೊನೆಯಿಲ್ಲ ಎಂದು ತಿಳಿಯಬೇಡಿ ಎಂದು ಎಚ್ಚರಿಸಿದರು. ಈ ಯೋಜನೆಯ ವಿಫಲತೆಗೆ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳೇ ಕಾರಣ ಎಂದರು.

(ವರದಿ: ಕಲ್ಕುಳಿ ವಿಠಲ ಹೆಗ್ಡೆ)

## ಕಾನ್ವೆಂಟ್ ಮಕ್ಕಳ ಹೆಮ್ಮೆಯ ಮೆರವಣಿಗೆ

ಕೊಪ್ಪ: ಇಲ್ಲಿನ ಕಾನ್ವೆಂಟ್ ಶಾಲೆಯಲ್ಲಿ ಈ ಬಾರಿಯ ಎಸ್ಸೆಸ್ಸೆಲ್ಸಿ ಪರೀಕ್ಷೆಯಲ್ಲಿ 67 ವಿದ್ಯಾರ್ಥಿ, ವಿದ್ಯಾರ್ಥಿನಿಯರ ಪೈಕಿ ಎಲ್ಲರೂ ಪಾಸಾಗಿ ಶೇ. 100ರ ಫಲಿತಾಂಶ ಪಡೆದ ಜಿಲ್ಲೆಯ ಏಕೈಕ ಶಾಲೆಯಾದುದಲ್ಲದೆ, ಗರಿಷ್ಠ ಫಲಿತಾಂಶಕ್ಕಾಗಿ ಎಲ್ಲಾ 6 ವಿಷಯಗಳಲ್ಲಿನ ಬಹುಮಾನಗಳನ್ನೂ, ಸಮಗ್ರ ಪಾರಿತೋಷಕವನ್ನೂ ಪಡೆದ ಸಂದರ್ಭದಲ್ಲಿ ಶಾಲಾ ಮಕ್ಕಳು ಜು. 29 ರಂದು ಊರಿನಲ್ಲಿ ಸಂಭ್ರಮದ ಮೆರವಣಿಗೆ ನಡೆಸಿದರು.







ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಶಿವಮನೆ ನಾಗರಾಜ್, ಅಚ್ಚು: ದೀಪಿಕೆ ಅಚ್ಚುಕೂಟ, ಕೊಪ್ಪ